18

# ಅಚಲ

ದ್ವೈಮಾಸಿಕ, ಸೆಪ್ಟೆಂಬರ್ 8, 1993





ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

ಸಂಪುಟ : 9 ಸಂಚಿಕೆ : 4

"ಅಚಲ" ಪತ್ರಿಕೆಯನ್ನು ಪಡೆಯ ಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನೈದು ರೂಪಾಯಿ ಗಳನ್ನು ಎಂ. ಓ/ಡ್ರಾಫ್ಟ್ ಮೂಲಕ ಕಳುಹಿಸಿ, ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯ ಬೇಕು. ಚೆಕ್ ಮೂಲಕ ಹಣ ಕಳಿಸುವವರು 20/ರೂ. ಗಳಿಗೆ ಕಳಿಸಬೇಕು. ಚಂದಾದಾರರು ತಮ್ಮ ವಿಳಾಸ ಬದ ಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.



**ಚಂದಾ ವಿವರ :**

| | | |
|---|---|---|
| ವಾರ್ಷಿಕ ಚಂದಾ | : | ರೂ. 15.00 |
| ಆಜೀವ ಚಂದಾ | : | ರೂ. 150.00 |
| (ಚೆಕ್ ಮೂಲಕ | : | ರೂ. 160.00) |
| ಸಂಸ್ಥೆಗಳಿಗೆ | : | ರೂ. 200.00 |
| ಬಿಡಿ ಪ್ರತಿ | : | ರೂ. 2.00 |
| ವಿಶೇಷ ಪ್ರತಿ | : | ರೂ. 3.50 |

**Printed at Lipi Mudrana,
No. 1, Bugle Rock Road, Bangalore-4.
Published by, Dr. G. Ramakrishna on behalf of Jagruthi Mahila Adhyayana Kendra, 261, I Main Road, Vyalikaval, Bangalore-3**

**ಲೇಖನ, ಹಣ ಕಳುಹಿಸಬೇಕಾದ ವಿಳಾಸ :–**

ಎನ್. ಗಾಯತ್ರಿ
ಬಿ–30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್,
9ನೇ ಕ್ರಾಸ್, ಒಂದನೇ ಮೇನ್
ವಿಜಯನಗರ 2ನೇ ಹಂತ
ಬೆಂಗಳೂರು : 560 040

## ಖಂಡನೆ

ಬಾಂಗ್ಲಾ ದೇಶದ ಜನಪ್ರಿಯ ಲೇಖಕಿ ತಾಸ್ಲಿಮ ನಸ್ರೀನ್ ಅವರು ಇಸ್ಲಾಂ ಮತ್ತು ಮಹಿಳೆಯರ ಬಗ್ಗೆ ತಮ್ಮ ಅಭಿಪ್ರಾಯವನ್ನು ಧೈರ್ಯವಾಗಿ ಪ್ರಕಟಿಸುತ್ತಿರುವ ಮಹಿಳೆ. ಅವರ ಕೃತಿಗಳೆಲ್ಲವನ್ನು ಇನ್ನು 15ದಿನದೊಳಗೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದೂ ಅಲ್ಲದೆ ಅವರನ್ನು ಗಲ್ಲಿಗೆ ಹಾಕಬೇಕೆಂದೂ ಬಂಗ್ಲಾದೇಶದ ಕೆಲವು ಮುಸ್ಲಿಂ 'ಧಾರ್ಮಿಕ' ನಾಯಕರು ಸರ್ಕಾರವನ್ನು ಒತ್ತಾಯಿಸಿದ್ದಾರೆ. ಸೆ. 23ರಂದು ಸಿಲ್ಹೆಟ್ ನಗರದಲ್ಲಿ ಸೇರಿದ್ದ 5000 ಜನರ ಸಭೆಯಲ್ಲಿ ಈ ಕೇಳಿಕೆಗಳನ್ನು ಸರ್ಕಾರದ ಮುಂದೆ ಇಡಲಾಯಿತು. ತಮ್ಮ ಕೇಳಿಕೆಗೆ ತಕ್ಕಂತೆ ಸರ್ಕಾರ ನಡೆಯದಿದ್ದರೆ ಮುಷ್ಕರ ಸಂಘಟಿಸುತ್ತಿರುವುದಾಗಿ ಈ 'ಧಾರ್ಮಿಕ' ನಾಯಕರು ಎಚ್ಚರಿಸಿದ್ದಾರೆ.

ಶ್ರೀಮತಿ ನಸ್ರೀನ್ ಅವರು ಹಲವಾರು ಜನಪ್ರಿಯ ಕೃತಿಗಳ ಕರ್ತೃಗಳಾಗಿದ್ದು, ಕಳೆದ ಡಿಸೆಂಬರ್ ಅಯೋಧ್ಯಾ ಘಟನೆಯ ನಂತರ ಬಂಗ್ಲಾದೇಶದಲ್ಲಿ ಅಲ್ಪ ಸಂಖ್ಯಾತ ಹಿಂದೂಗಳ ವಿರುದ್ಧ ನಡೆದ ಹಿಂಸಾಚಾರಗಳ ವಿರುದ್ಧ 'ಲಜ್ಜಾ' ಎಂಬ ಕಾದಂಬರಿಯನ್ನು ಬರೆದಿದ್ದಾರೆ. ಪ್ರಗತಿಪರ ನಿಲುವಿನ ಲೇಖಕಿ ತಾಸ್ಲಿಮ ನಸ್ರೀನ್‌ರ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲಿನ ಹಲ್ಲೆಯನ್ನು ಅಚಲ ತೀವ್ರವಾಗಿ ಖಂಡಿಸುತ್ತದೆ.

— **ಸಂಪಾದಕರು**

# ಸಂಪಾದಕೀಯ

## ಚರಿತ್ರೆಯನ್ನು ತಿದ್ದುವ ಹೋರಾಟಗಳು

ದಬ್ಬಾಳಿಕೆಯೇ ಮುಖ್ಯಲಕ್ಷಣವಾಗಿರುವ ಸಮಾಜದಲ್ಲಿ ಸ್ವಾತಂತ್ರ್ಯವು ಉದ್ಧಟತನವೆನಿಸುತ್ತದೆ ಎಂದು ಥಿಯೋದೊರ್ ಅದೋರ್ನ್ ಜರ್ಮನಿಯ ಬಗ್ಗೆ ಹೇಳಿದ್ದ ನುಡಿ ಇಂದು ನಮ್ಮ ದೇಶದ ಸಂದರ್ಭದಲ್ಲಿ ನಿಜವಾಗಿದೆ. ಐತಿಹಾಸಿಕ ವಾಸ್ತವಾಂಶಗಳನ್ನು ತಿಳಿಸಲೆತ್ನಿಸುವುದು ಇಲ್ಲಿ ಕೇವಲ ಉದ್ಧಟತನವಲ್ಲ, ಶಿಕ್ಷಾರ್ಹ ಅಪರಾಧವೆನಿಸುವಂಥ ಸ್ಥಿತಿ ಇಂದು ಒದಗಿದೆ. ದೆಹಲಿಯಲ್ಲಿ ಇತ್ತೀಚೆಗೆ 'ಸಹಮತ್' ಏರ್ಪಡಿಸಿದ್ದ ಅಯೋಧ್ಯೆ ಕುರಿತ ಪ್ರದರ್ಶನಕ್ಕೆ ಕೋಮುವಾದಿಗಳು, ಆಳುವ ವರ್ಗ ತೋರಿಸಿರುವ ಪ್ರತಿಕ್ರಿಯೆ ನಿಜಕ್ಕೂ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಒದಗಿರುವ ದುರ್ದೆಶೆಯ ನಿದರ್ಶನದಂತಿದೆ.

ಮೂಲತಃ ನಿರಪಾಯಿ ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ 'ಸಹಮತ್' ತನ್ನನ್ನು ಒಂದು ಜಾತ್ಯಾತೀತ ಸಂಘಟನೆಯೆಂದು ಘೋಷಿಸಿಕೊಂಡಿದೆ. ಕೋಮುಸೌಹಾರ್ದತೆಯ ಉದ್ದೇಶದಿಂದ ಅಯೋಧ್ಯೆಯನ್ನು ಕುರಿತಂತೆ ಲಭ್ಯವಿರುವ ಎಲ್ಲ ಬಗೆಯ ಚಾರಿತ್ರಿಕ ಮತ್ತು ಪೌರಾಣಿಕ ದಾಖಲೆ, ಮಾಹಿತಿಗಳ ಪ್ರದರ್ಶನವನ್ನು ಆ ಸಂಘಟನೆ ಏರ್ಪಡಿಸಿತ್ತು. ಪ್ರದರ್ಶನದಲ್ಲಿಟ್ಟಿದ್ದ 83 ಪ್ಯಾನೆಲ್‌ಗಳ ಪೈಕಿ ಒಂದು ಮಾತ್ರ ರಾಮಕಥೆಯ ವಿವಿಧ ಆವೃತ್ತಿಗಳನ್ನು ನಿರೂಪಿಸುವುದಾಗಿತ್ತು. ಅದರಲ್ಲಿ ಏಳು ಆವೃತ್ತಿಗಳಿದ್ದು, ಬೌದ್ಧ ಮತ್ತು ಜೈನ ಧಾರ್ಮಿಕ ಸಂಪ್ರದಾಯಗಳ ಪ್ರಾಚೀನ ಗ್ರಂಥಗಳಿಂದ ಆರಿಸಿದ ಕಥೆಗಳೂ ಸೇರಿದ್ದವು. ಕ್ರಿ.ಪೂ. 4ನೇ ಶತಮಾನಕ್ಕೆ ಸೇರಿದ ಬೌದ್ಧಜಾತಕಕಥೆಯು ರಾಮಸೀತೆಯರನ್ನು ಅಣ್ಣ–ತಂಗಿಯರೆಂದು ನಂತರ ರಾಜರಾಣಿಯರಾದರೆಂದು ಚಿತ್ರಿಸುತ್ತದೆ. ಜೈನ ಪರಂಪರೆ ಸೀತೆಯನ್ನು ರಾವಣನ ಮಗಳೆಂದು ಹೇಳುವ ಪ್ರಾಚೀನ ಕಥಾಂಶವನ್ನು ನಿರೂಪಿಸುತ್ತದೆ. ಈ ವಿವಿಧ ರಾಮಕಥೆಯ ಆವೃತ್ತಿಗಳು ಈ ಕಥಾವಾಹಿನಿ ಕಾಲ–ದೇಶಗಳಿಗೆ ಅನುಗುಣವಾಗಿ ಬೆಳೆದಿದೆ ಬದಲಾಗಿದೆ ಎಂಬ ನಿಜವನ್ನು ಪರಿಚಯಿಸುವಂಥದಾಗಿತ್ತು. ಈ ಜೈನ ಮತ್ತು ಬೌದ್ಧ ಆವೃತ್ತಿಗಳನ್ನು ಆಧರಿಸಿದ ಭಿತ್ತಿಚಿತ್ರಗಳನ್ನು 'ಸಹಮತ್' ಪ್ರಚಾರಕ್ಕೆ ಬಳಸಿತ್ತಷ್ಟೆ.

ಆದರೆ ಧರ್ಮ, ಸಂಸ್ಕೃತಿ, ಪರಂಪರೆಗಳೆಲ್ಲ ತಮ್ಮ ಅಧಿಕಾರರಾಜಕೀಯದ ದಾಳಗಳೆಂಬಂತೆ ನಡೆದುಕೊಳ್ಳುವ ಕೆಲವು ನವಹಿಂದೂವಾದಿಗಳು ಈ ಇಡೀ ಪ್ರದರ್ಶನವೇ ದುರುದ್ದೇಶದ್ದು, ಒಂದು ಗುಂಪಿನ ಜನರ ಧಾರ್ಮಿಕ ಭಾವನೆಗೆ ನೋವು ಉಂಟುಮಾಡುವಂಥಾದ್ದೆಂದು ಮುಕ್ತನಾದದ ಹುಯಿಲೆಬ್ಬಿಸಿದರು. ನಿಜಾಂಶಗಳನ್ನು ಪರೀಶಿಲಿಸುವ ಶ್ರಮ ವಹಿಸದೆ ಆಳುವ ವರ್ಗದವರು ತಮ್ಮ ಅಧಿಕಾರದ ಹಿತಾಸಕ್ತಿ ಮತ್ತು ಹೇಳಿಕೆಮಾತುಗಳಿಂದ ಪ್ರೇರಿತರಾಗಿ ಈ ಸಂಘಟನೆ ವಿರುದ್ಧ ಸುಳ್ಳು ಕೇಸುಗಳನ್ನು ಸೃಷ್ಟಿಸಿ, ಕಾನೂನು ರೀತ್ಯಾ ದಂಡಿಸಲು ಮುಂದಾದರು. ಕೋಮುವಾದದ ಸಂಚು, ವಿದ್ರೋಹಗಳ ನೀಚತನದ ಆಪಾದನೆಗಳನ್ನು ಸಹಮತದ ಸಂಘಟನಾಕಾರರ ಮೇಲೆ ಆರೋಪಿಸಲಾಯಿತು. ಆದರೆ ಬಾಬರಿ ಮಸೀದಿಯನ್ನು ನಿಜವಾಗಿ ಕೆಡವಿ, ದೇಶಾದ್ಯಂತ ಕೋಮು ಹಿಂಸಾಚಾರದ ದಳ್ಳುರಿಯೆಬ್ಬಿಸಿದವರ ವಿರುದ್ಧ ಯಾವುದೇ ಶಿಕ್ಷೆ ವಿಧಿಸಲು ಈ ಆಳುವವರ್ಗಕ್ಕೆ ಸಾಧ್ಯವಾಗಲಿಲ್ಲವೆಂಬುದನ್ನು ಜನರಿನ್ನೂ ಮರೆತಿಲ್ಲ. ಆದ್ದರಿಂದ ಸಹಮತದ ವಿರುದ್ಧದ ಕಾರ್ಯಾಚರಣೆ ನೀಡುವ ಸಂದೇಶವಿಷ್ಟೆ: ಕೋಮುಸೌಹಾರ್ದದಂಥ ರಚನಾತ್ಮಕ ಅಭಿವ್ಯಕ್ತಿ ಕೂಡ ಅಧಿಕಾರ ರಾಜಕೀಯದ ಅವಶ್ಯಕತೆಗೆ ಪೂರಕವಾಗಿ, ಆಳುವ ವರ್ಗದ ಶಿಷ್ಟತೆಯ ಕಲ್ಪನೆಗಳಿಗೆ ಪೂರಕವಾಗಿದ್ದರೆ ಮಾತ್ರ ಮಾನ್ಯವಾಗಬಹುದು. ಇಲ್ಲದಿದ್ದರೆ ಕೋಮು ಶಕ್ತಿಗಳೂ, ಸರ್ಕಾರಗಳೂ ಇವರನ್ನು ಒಟ್ಟಾಗಿಯೇ ! ಆಕ್ರಮಿಸಬಹುದು !

ಈ ಘಟನೆ ಒಂದು ಆಕಸ್ಮಿಕವಲ್ಲ. ಇತ್ತೀಚಿನ ವರ್ಷಗಳಲ್ಲಿ ಹಿಂದುತ್ವದ ನವ ನಾಯಕರು ಅತ್ಯಂತ ವೈವಿಧ್ಯಮಯವಾದ ನಂಬಿಕೆಗಳು, ಆಚರಣೆಗಳು, ಪದ್ಧತಿಗಳು, ತತ್ವಗಳಿಂದ ಕೂಡಿರುವ ಹಿಂದೂ ಎಂಬ ಧರ್ಮಕ್ಕೆ ಏಕರೂಪದ ಸಾಂಸ್ಕೃತಿಕ ಮುಖವನ್ನು ರೂಪಿಸಲು ನಡೆಸುತ್ತಿರುವ ಹೋರಾಟಕ್ಕೂ ಮೇಲಿನ ಘಟನೆಗೂ ನಿಕಟ ಸಂಬಂಧವಿದೆ. ಜಗತ್ತಿನ ಇತರ ಪ್ರಮುಖ ಧರ್ಮಗಳಂತೆ ಹಿಂದೂ ಧರ್ಮಕ್ಕೆ ಏಕಾಂಡವಾದ ಮಠವಿಲ್ಲ, ಏಕ ರೂಪದ ಸಿದ್ಧಾಂತ, ಸಂಪ್ರದಾಯವೂ ಇಲ್ಲ. ಹಿಂದುವಾದವನು ಇಂಥದೇ ಸನಾತನ ಆಚರಣೆಗೆ ನಂಬಿಕೆಗಳಿಗೆ ನಿಷ್ಠುರವಾಗಿ ಬದ್ಧನಾಗಿರಬೇಕಾದದ್ದು ಕಡ್ಡಾಯವೂ ಅಲ್ಲ.

ಸಾಮಾಜಿಕ ಮಾನವಶಾಸ್ತ್ರಜ್ಞರ ಪ್ರಕಾರ ಹಿಂದೂ ಧರ್ಮ ಎಂಬುದು ಶುದ್ಧಿ ಮಲಿನತೆಗಳಿಗೆ ಹೊಂದಿಕೊಂಡ ನಿರ್ದಿಷ್ಟ ಸಾಮಾಜಿಕ ಆಚರಣೆಗಳ ಮೂಲಕ ಲಕ್ಷಣ ಪಡೆಯುವಂಥಾದ್ದು. ಅದು ಮೂಲತಃ ಜಾತಿಗಳಿಗೆ ಸಂಬಂಧಿಸಿದ್ದು, ಈ ಜಾತಿಗಳು ವಿಭಜಕ ಗುಣವುಳ್ಳವೇ ವಿನಾ ಸಂಯೋಜಕವಲ್ಲ. ಆದ್ದರಿಂದ ಬಲಿಷ್ಠರು, ಅಧಿಕಾರಾರೂಢರು ಕಾಲಕಾಲಕ್ಕೆ ಕೆಲವು ಸಾಂಸ್ಕೃತಿಕ ಅಂಶಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಮೇಲೆತ್ತುವುದು, ಅದಕ್ಕಾಗಿ ಇನ್ನಿತರ ಅಸಂಖ್ಯಾತ ಕಿರುಸಂಸ್ಕೃತಿಯ ನೆಲೆಗಳನ್ನು ಹತ್ತಿಕ್ಕಿ ನಾಶಪಡಿಸಲೆತ್ನಿಸುವುದು ಇಲ್ಲಿ ಚರಿತ್ರೆಯುದ್ದಕ್ಕೂ ಕಂಡುಬರುತ್ತದೆ. ಹಿಂದೂ ಧರ್ಮದ ಎಲ್ಲ ಬಹುರೂಪಿ ಆಚರಣೆ, ಆರಾಧನಾ ವಸ್ತು, ವಿಧಾನ, ತಾತ್ವಿಕ ಸಿದ್ಧಾಂತ, ಪದ್ಧತಿ, ನಂಬಿಕೆಗಳಲ್ಲಿ ಯಾವುದಾದರೂ ಒಂದು ನಿಲುವು ಮತ್ತಿತರರಿಗೆ ಸದಾ 'ನೋವುಂಟುಮಾಡುವ' ಬಗೆಯ ವಿರೋಧವನ್ನು ಹೊಂದಿರುವುದು ಸಾಧ್ಯ. ಆದ್ದರಿಂದ ನವಹಿಂದುತ್ವದ ವಕ್ತಾರರು ಎತ್ತಿಹಿಡಿಯ ಬಯಸುವ ಧಾರ್ಮಿಕ ಸಾಮಾಜಿಕ ಏಕತತ್ವರೂಪವೆಂಬುದು, ಹಿಂದೂ ಧರ್ಮದ ಅಡಿಯಲ್ಲಿ ಜೀವಂತವಾಗಿರುವ ಇತರ ನೂರಾರು ಮುಖಗಳಿಗೆ ಕೇವಲ ಧಾರ್ಮಿಕ ಭಾವನೆಗೆ ನೋವುಂಟುಮಾಡುತ್ತಿಲ್ಲ, ಅವುಗಳ ಅಸ್ತಿತ್ವವನ್ನೇ ನಾಶಪಡಿಸುವ ರೀತಿಯದಾಗಿದೆ. ಈ ವಿಪರ್ಯಾಸ ಆಳುವ ವರ್ಗದವರಿಗೆ ಗಮನಕ್ಕೆ ಬರದಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಬಹಿರಂಗದ ಘೋಷಿತ ಸಂಸ್ಕೃತಿಯ ಏಕತೆ ಭಾವನೆ, ಕಲ್ಪನೆಗಳು ಅಂತರಂಗದಲ್ಲಿ ದಬ್ಬಾಳಿಕೆಯ, ಹತ್ತಿಕ್ಕುವ ಅಸಮಾನತೆ, ಅಸ್ಪೃಶ್ಯತೆಯ ತಳಹದಿಯ ಮೇಲೆ ನಿಂತಿದೆ. ಈ ವೈಪರೀತ್ಯವನ್ನು ತೋರಿಸಿಕೊಟ್ಟು ಜನಜಾಗೃತಿಯನ್ನು ಉಂಟುಮಾಡಲೆತ್ನಿಸುವ ಸಮಾಜವಾದಿ ಶಕ್ತಿಗಳು, ಚಿಂತನೆಗಳು, ಸಂಸ್ಕೃತಿಯ ಅಸ್ಪರ್ಶಿತ ನೆಲೆಗಳನ್ನೂ ತಲುಪಲು, ಅಲ್ಲಿನ ಜೀವಂತ ಶಕ್ತಿಯನ್ನು ತನ್ನೊಳಕ್ಕೆ ತಂದುಕೊಳ್ಳುವ ಮೂಲಕ ಸಬಲವಾಗಬೇಕು. ಪರ್ಯಾಯ ಸಂಸ್ಕೃತಿಯನ್ನು ರೂಪಿಸುವುದೆಂದರೆ ಎಲ್ಲ ಸಾಂಸ್ಕೃತಿಕ ನೆಲೆಗಳನ್ನೂ ಸಹಜವಾಗಿ ವಾಸ್ತವದ ಅರಿವಿನೊಂದಿಗೆ ಗೌರವಿಸುವ ಮತ್ತು ಅವುಗಳ ಒಳಗೆ ಹುದುಗಿರುವಂಥ ಮಾನವೀಯ ಉತ್ತಮಾಂಶಗಳಿಗೆ ಪೋಷಣೆ ನೀಡುವಂಥ ಬದುಕಿನ ವಿಧಾನವನ್ನು ರೂಪಿಸುವುದೇ ಆಗಿದೆ. ಈ ರೂಪಣದ ಕ್ರಿಯೆ ಯಾರೋ ಕೆಲವರ ಮುಖಂಡತ್ವದಿಂದ ಇತರರು ಆಜ್ಞೆ ಪಡೆವ ರೀತಿಯದಲ್ಲ. ಎಲ್ಲ ಅಪರಿಚಿತ ಸಾಂಸ್ಕೃತಿಕ ನೆಲೆಗಳೂ ತಮ್ಮ ಸಂವೇದನೆಯೊಂದಿಗೆ ಅಭಿವ್ಯಕ್ತಿಗೊಳ್ಳಲು ಸಹಜವಾತಾವರಣ ಮೊದಲು ನಿರ್ಮಾಣವಾಗಬೇಕು. ಅದಕ್ಕಾಗಿ ಅಭಿವ್ಯಕ್ತಿ ಸ್ವಾತಂತ್ರ್ಯ ಧಕ್ಕೆಗೊಳ್ಳದಂತೆ ಕಾಯ್ದುಕೊಳ್ಳುವುದು ಅತ್ಯಂತ ಅವಶ್ಯಕವಾಗಿದೆ.

–ಬಿ. ಎನ್. ಸುಮಿತ್ರಾಬಾಯಿ



ವ್ಯಕ್ತಿವಿಶೇಷ...

# 'ವೀರಮಾತೆ'ಯ ವನಿತೆ ವೆಂಕಮ್ಮ

–ಬಿ. ಎನ್. ಸುಮಿತ್ರಾಬಾಯಿ

ಧಾರವಾಡದ 'ವನಿತಾ ಸೇವಾ ಸಮಾಜ'ದಿಂದ 1952ರಲ್ಲಿ ಪ್ರಾರಂಭವಾದ 'ವೀರಮಾತೆ' ಹದಿನೆಂಟು ವರ್ಷ ನಡೆದ ಉತ್ತಮ ವಿಚಾರಪ್ರಚೋದನೆ ನಡೆಸಿದ ಮಹಿಳಾ ಮಾಸಪತ್ರಿಕೆಯಾಗಿತ್ತು. ಶ್ರೀಮತಿ ಸರೋಜಿನಿ ಮಹಿಷಿಯವರು ಪ್ರಧಾನ ಸಂಪಾದಕಿಯಾಗಿದ್ದ ಈ ಪತ್ರಿಕೆಯ ಉದ್ದಕ್ಕೂ ಸರ್ವವಿಧವಾದ ಜವಾಬ್ದಾರಿ ನಿರ್ವಹಿಸಿದವರು 'ವೀರಮಾತೆ'ಯ ಸಹಸಂಪಾದಕಿಯಾಗಿದ್ದ ಶ್ರೀಮತಿ ವೆಂಕಮ್ಮಾ ಕೊಯಿಮತ್ತೂರ ಅವರು. ತಮ್ಮ ಬದುಕನ್ನು ರೂಪಿಸಿಕೊಳ್ಳುವಲ್ಲಿ, ಮತ್ತು ಮಹಿಳೆಯರ ಏಳಿಗೆಗಾಗಿ ದುಡಿದ ರೀತಿಯಲ್ಲಿ ಇಂದಿಗೂ ಮಾದರಿಯಾಗಬಲ್ಲ ದಿಟ್ಟತನ, ಹರಿತ ವಿಚಾರಶಕ್ತಿ ಮತ್ತು ಪ್ರಗತಿಪರ ಚಿಂತನೆಯುಳ್ಳ ಧೀಮಂತೆ ಈಕೆ. ತಮ್ಮ ಸಾಧನೆ ಬಗ್ಗೆ ಹೇಳಲು ತುಂಬ ಸಂಕೋಚಪಡುವ ಈ ನಿಗರ್ವಿ ಸರಳ ಜೀವಿ, ತಮ್ಮಂಥ ಅನೇಕರಿಗೆ ಮಾರ್ಗ ಹಾಕಿಕೊಟ್ಟ ವನಿತಾ ಸೇವಾ ಸಮಾಜ, ಅದರ ಸ್ಥಾಪಕರಾದ ಶ್ರೀಮತಿ ಭಾಗೀರಥಿ ಬಾಯಿ ಪುರಾಣಿಕ (ಮಾಯಿ) ಮತ್ತು ಶ್ರೀ ಲಕ್ಷ್ಮಣರಾವ. ರಂ. ಪುರಾಣಿಕ (ದಾದಾ) ಅವರ ಬಗ್ಗೆ ಮುಕ್ತಕಂಠದಿಂದ ಭಾವತುಂಬಿ ಮಾತನಾಡುತ್ತಾರೆ. ಇದೀಗ ಎಪ್ಪತ್ತಮೂರರ ವಯಸ್ಸಿನಲ್ಲಿದ್ದರೂ ಪ್ರಪಂಚದ ಎಲ್ಲ ಆಗುಹೋಗುಗಳ ಬಗ್ಗೆ ತೆರೆದ ಮನಸ್ಸಿನಿಂದ ವಿಚಾರಮಾಡಬಲ್ಲ ಈ ವೆಂಕಮ್ಮನವರನ್ನು ನಾವು 1989ರಲ್ಲಿ ಮೊದಲಬಾರಿಗೆ ಪರಿಚಯ ಮಾಡಿಕೊಂಡಾಗ ನಡೆಸಿದ್ದ ಸಂದರ್ಶನವೊಂದನ್ನು ಇಲ್ಲಿ ನೀಡುತ್ತಿದ್ದೇವೆ. ಅದಕ್ಕೆ ಹಿನ್ನೆಲೆಯಾಗಿ ವೆಂಕಮ್ಮನವರ ಕಿರು ಪರಿಚಯ ಇಲ್ಲಿದೆ.

ವೆಂಕಮ್ಮಾ ಕೊಯಿಮತ್ತೂರು ಅವರು ಹುಟ್ಟಿದ್ದು ಚಿಕ್ಕಮಗಳೂರಿನಲ್ಲಿ, 1920ರ ನವೆಂಬರ್ 27ರಂದು. ಅವರ ತಂದೆ ವರಹಾಮೂರ್ತಿ, ಇಂಟರ್‌ಮಿಡಿಯೆಟ್ ಆದನಂತರ ಓದು ನಿಲ್ಲಿಸಿ ಚಿಕ್ಕಮಗಳೂರಿನ ಜಟೇಜನ್ನಿ ಕಂಪನಿಯಲ್ಲಿ ಗುಮಾಸ್ತರಾಗಿದ್ದರು. ಪತ್ನಿ ಮಹಾಲಕ್ಷ್ಮಮ್ಮ ಹನ್ನೊಂದು ಮಕ್ಕಳನ್ನು ಹೆತ್ತು ಪತಿಯ ನಿಧನದನಂತರ ಮಕ್ಕಳ ಜವಾಬ್ದಾರಿಯನ್ನು ತುಂಬ ಶ್ರಮಪಟ್ಟು ನಿರ್ವಹಿಸಿದ ದಿಟ್ಟೆ. ಸುಮಾರು ಹದಿನಾರರ ವಯಸ್ಸಿನಲ್ಲಿ ವೆಂಕಮ್ಮನವರಿಗೆ ಅವರ ತಾಯಿಯ ತಮ್ಮನೊಂದಿಗೆ ಮದುವೆಯಾಯಿತು. ಮೂರು ವರ್ಷದಲ್ಲಿ ಪತಿಯು ನಿಧನ ಹೊಂದಿದಾಗ 19ವರ್ಷದ ಯುವತಿ ವೆಂಕಮ್ಮ ಒಂದೂವರೆ ವರ್ಷದ ಹೆಣ್ಣು ಮಗುವಿನ ತಾಯಿ. ಮಗಳು ಮುಂದೆ ಪರಾಧೀನದಲ್ಲಿ ಬಾಳುವಂತೆ ಆಗಬಾರದೆಂಬ ಮುಂದಾಲೋಚನೆಯಿಂದ ಇವರ ತಾಯಿ ವೆಂಕಮ್ಮನವರನ್ನು, ಕೈಕೂಸಿನೊಂದಿಗೆ ಧಾರವಾಡದ ವನಿತಾಸೇವಾ ಸಮಾಜಕ್ಕೆ 1941ರಲ್ಲಿ ಸೇರಿಸಿದರು. ಅಲ್ಲಿ ವೆಂಕಮ್ಮನವರು S.S.L.C. ಯನ್ನು ಮುಗಿಸಿ S.T.C. ತರಬೇತಿ ಪಡೆದು, ಹೊರಗೆ ಕೆಲಸಕ್ಕೆ ಸೇರಲು ಬಯಸದೆ ಅದೇ ಸಮಾಜದಲ್ಲಿ ಟೀಚರಾದರು. ಅದರ ಪರಿಚಾರಕಿಯಾಗಿ, ಪ್ರಚಾರಕಿಯಾಗಿ ದುಡಿದರು. ಸಮಾಜದ ಕಾರ್ಯನಿರ್ವಹಣೆಗಾಗಿ ಸಾರ್ವಜನಿಕರಿಂದ ಹಣ ಸಂಗ್ರಹಿಸುವ ಕಾರ್ಯ, 'ವೀರಮಾತೆ'ಯ ಸಹಸಂಪಾದಕತ್ವದ ಜೊತೆಗೆ ಮುಂದೆ 1957ರಲ್ಲಿ C.P.E.D.ಯಲ್ಲಿ ಉತ್ತೀರ್ಣರಾಗಿ ಅಲ್ಲಿನ ಹೆಣ್ಣು ಮಕ್ಕಳಿಗೆ ವ್ಯಾಯಾಮ ಶಿಕ್ಷಕಿಯಾಗಿಯೂ ಕಾರ್ಯನಿರ್ವಹಿಸಿದರು. 'ವೀರಮಾತೆ' ಯಲ್ಲಿ ಪ್ರಕಟವಾಗಿರುವ ಅವರ ಲೇಖನಗಳು ಜಾಗತಿಕ ನೆಲೆಯಲ್ಲಿ ಸ್ತ್ರೀ ಸಮಸ್ಯೆಗಳನ್ನು ವಿವೇಚಿಸುತ್ತ ಸ್ಥಳೀಯ ಭಾಷೆ, ಸಂಸ್ಕೃತಿಗಳ ಅರಿವಿನೊಂದಿಗೆ ಅವುಗಳನ್ನು ಪರಿಶೀಲಿಸುವ ಕಾರಣದಿಂದಾಗಿ ಇಂದಿಗೂ ಮುಖ್ಯವಾಗಬಲ್ಲವು.

ಅಚಲ : ವೀರಮಾತೆ ಪತ್ರಿಕೆ ಪ್ರಾರಂಭಿಸಿದ ಉದ್ದೇಶವೇನು? ಆರಂಭದಲ್ಲಿ ದುಡಿದವರು ಯಾರು? ಪತ್ರಿಕೆಯ ಆರ್ಥಿಕ ಮತ್ತಿತರ ಪರಿಸ್ಥಿತಿ ಹೇಗಿತ್ತೆಂದು ಸ್ವಲ್ಪ ವಿವರಿಸುತ್ತೀರಾ?

ವೆಂಕಮ್ಮ : 'ವನಿತಾ ಸೇವಾ ಸಮಾಜ' ಹೆಣ್ಣುಮಕ್ಕಳ ಎಲ್ಲಾ ವಿಧವಾದ ಏಳಿಗೆಯನ್ನು ಗುರಿಯಾಗಿಟ್ಟುಕೊಂಡಿದ್ದ ಸಂಸ್ಥೆಯಾಗಿತ್ತು. ಅನಾಥ ಹೆಣ್ಣುಮಕ್ಕಳಿಗೆ ಶಿಕ್ಷಣ ಮತ್ತು ಉದ್ಯೋಗದ ಅವಕಾಶ, ಮತ್ತು ಆಶ್ರಯ ನೀಡುವ ಧ್ಯೇಯದಿಂದ ಮಾಯಿ ಮತ್ತು ದಾದಾ ಅವರು ಪೋಷಿಸಿ ಬೆಳೆಸಿದ ಸಮಾಜ ಅದು. ಹೆಣ್ಣುಮಕ್ಕಳ ಮಾನಸಿಕ, ಶಾರೀರಕ, ಆರ್ಥಿಕ ಬೆಳವಣಿಗೆಗೆ ಪೂರ್ಣ ನೆರವಾಗುವಂತೆ ಅಲ್ಲಿ ನೇರ ಶಾಲಾ ಶಿಕ್ಷಣ

ವಲ್ಲದೆ ಚಿತ್ರದ ಹೊಲಿಗೆ, ನೇಯ್ಗೆ, ನೂಲುವಿಕೆ, ನರ್ಸಿಂಗ್, ಹೊಲಿಗೆ ಮುಂತಾದ ವೃತ್ತಿ ತರಬೇತಿ ಶಿಕ್ಷಣವನ್ನು ನೀಡಲಾಗುತ್ತಿತ್ತು. ಇದರ ವಿಸ್ತರಣೆಯಾಗಿ ಮುದ್ರಣಾಲಯಕಾರ್ಯ, ಕಂಪೋಸಿಂಗ್‌ಗಳಲ್ಲೂ ತರಬೇತಿ ನೀಡುತ್ತಿದ್ದರು. ವ್ಯಾಯಾಮ, ಯೋಗಾಸನ, ಸೈಕಲ್, ಕುದುರೆ ಸವಾರಿ, ಕತ್ತಿ, ಲಾಠಿವರಸೆಗಳು. ಈಜುಗಳನ್ನು ವ್ಯವಸ್ಥಿತವಾಗಿ ಕಲಿಸಲಾಗುತ್ತಿತ್ತು. ಇಂಥ ತರಬೇತಿಯ ಕಾರ್ಯಚಟುವಟಿಕೆಗಳ ಮುಖವಾಣಿಯಾಗಿ ಸ್ತ್ರೀಯರ ಮನೋವಿಕಾಸಕ್ಕೆ ನೆರವಾಗುವ ಉದ್ದೇಶದಿಂದ 'ವೀರ ಮಾತೆ' ಮಹಿಳಾ ಮಾಸಪತ್ರಿಕೆಯನ್ನು ಪ್ರಾರಂಭಿಸಲಾಯಿತು.



ಈ ಪತ್ರಿಕೆಗೆ ಈ ಸಂಸ್ಥೆಯ ಬಗ್ಗೆ ಕಾಳಜಿಯಿದ್ದು ಉತ್ತಮ ಸಾಹಿತ್ಯಾಭಿರುಚಿಯಿದ್ದ ಲೇಖಕರು ಸಂಪಾದಕ ಮಂಡಲಿಯಲ್ಲಿದ್ದರು. ಶ್ರೀ ಹಳಪೇಟ ಚಿಂತಾಮಣಿ, ನಾರಾಯಣ ಶರ್ಮಾ, ನಾ. ರಾಜಪುರೋಹಿತ ಶ್ರೀಮತಿ ಸರೋಜಿನಿ ಮಳೆಬೆನ್ನೂರ, ವಿನೀತ ರಾಮಚಂದ್ರರಾವ್ ಮುಂತಾದವರು ನಿಯಮಿತವಾಗಿ ಸಭೆಸೇರಿ ಪತ್ರಿಕೆಯ ಅಂಕಣಗಳ ಸ್ವರೂಪ, ಶೀರ್ಷಿಕೆ ಮುಂತಾದವುಗಳನ್ನು ಚರ್ಚಿಸಿ ನಿರ್ಧರಿಸುತ್ತಿದ್ದರು. ವನಿತಾಸೇವಾ ಸಮಾಜದ ಕಾರ್ಯಕಾರಿ ಸಮಿತಿಯಲ್ಲಿ ಸದಸ್ಯರಾಗಿದ್ದು, ಸಮಾಜದ ಸೇವೆಗೆ ಬದುಕು ಮುಡಿಪಾಗಿಟ್ಟಿದ್ದ ಕೃಷ್ಣಾಬಾಯಿ ಕರ್ಣಿಕ, ಮನೋರಮಾಬಾಯಿ ಪಿಂಗೆ, ಗೋದಾವರಿ ಬಾಯಿ ಹೆಗಡೆ, ಮತ್ತು ಯಮುನಾ ಬಾಯಿ ನಾಡಕರ್ಣಿ ಮುಂತಾದ ಮಹಿಳೆಯರು ಬಹುವಾಗಿ ದುಡಿದಿದ್ದಾರೆ. ಸಮಾಜದ ಕಾರ್ಯ ಚಟುವಟಿಕೆಗಳಿಗಾಗಿ ಸಾರ್ವಜನಿಕರಿಂದ ದಾನ, ಚಂದಾಗಳನ್ನು ಸಂಗ್ರಹಿಸಬೇಕಾಗಿತ್ತು. ಆದ್ದರಿಂದ ಪತ್ರಿಕೆಯ ಆರ್ಥಿಕ ಸ್ಥಿತಿಯೂ ಅದೇ ರೀತಿಯದು.

ಅಚಲ : ನಿಮ್ಮ ಲೇಖಕ ಲೇಖಕಿಯರು ಯಾರು? ಅವರಿಂದ ಲೇಖನ ಪಡೆಯುತ್ತಿದ್ದ ಬಗೆ ಹೇಗೆ? ಓದುಗರ ಪ್ರತಿಕ್ರಿಯೆ ಹೇಗಿತ್ತು? ಅವರ ಪ್ರತಿಕ್ರಿಯೆ ದಾಖಲಿಸುವ ಯತ್ನವಿತ್ತೆ?

'ವೀರ ಮಾತೆ' ಪ್ರಾರಂಭಿಸಿದಾಗ ಪತ್ರಿಕೆಯ ಕೆಲಸಗಾರರೇ ಎಲ್ಲಾ ಪುಟಗಳನ್ನು ಬರೆದು ತುಂಬಿಸಬೇಕಾಗುತ್ತಿತ್ತು. ಸ್ತ್ರೀಯರ ಏಳಿಗೆ ಇದರ ಗುರಿಯಾಗಿದ್ದು ಆ ಧ್ಯೇಯವಿದ್ದ ಯಾರಾದರೂ ಲೇಖನವನ್ನು ಬರೆಯಬಹುದಿತ್ತು. ಬರಹಗಾರರಲ್ಲಿ ಸ್ತ್ರೀ ಪುರುಷರೆಂದು ಭೇದ ವೆಣಿಸುತ್ತಿರಲಿಲ್ಲ. ಪತ್ರಿಕೆ ಪ್ರಚಾರಕ್ಕೆ ಬಂದಮೇಲೆ ಅನೇಕ ಸಾಹಿತ್ಯಾಸಕ್ತರು ತಾವಾಗಿ ಲೇಖನಗಳನ್ನು ಬರೆದು ಕಳಿಸತೊಡಗಿದರು ಆ ದಿನಗಳಲ್ಲಿ ತುಂಬ ಉತ್ಸಾಹದಿಂದ ಬರೆಯುತ್ತಿದ್ದ ಯುವ ಬರಹಗಾರರು ಶಿದ್ಲಿಂಗ ಪಟ್ಟಣಶೆಟ್ಟಿ, ಚಂದ್ರಶೇಖರ ಕಂಬಾರ ಮುಂತಾದವರು ಇಂದು ಹೆಸರಾಂತ ಲೇಖಕರಾಗಿದ್ದಾರಲ್ಲ.

ಜನರ ಪ್ರತಿಕ್ರಿಯೆ ಬಗ್ಗೆ ಹೇಳುವುದಾದರೆ, ಅವರು ಪ್ರತಿಕೆಯನ್ನು ಓದಿ ಅಲ್ಲಿನ ಬರಹಗಳಿಗೆ ಪ್ರತಿಕ್ರಿಯಿಸುವುದಕ್ಕಿಂತ ಹೆಚ್ಚಾಗಿ ಅದಕ್ಕಾಗಿ ದುಡಿಯುತ್ತಿರುವವರ ಬಗ್ಗೆಯೇ ಪ್ರತಿಭಟನೆ ತೋರುತ್ತಿದ್ದುದುಂಟು. ಇಂಥ ಸಂದರ್ಭಗಳನ್ನು ಪತ್ರಿಕೆ ಮೂಲಕ ಚರ್ಚಿಸುತ್ತಿರಲಿಲ್ಲ. ಸಂಬಂಧಿಸಿದವರಿಗೇ ನೇರವಾಗಿ ಪತ್ರಬರೆದು ಉತ್ತರ ನೀಡಲಾಗುತ್ತಿತ್ತು. ಇದು ಅಂದಿನ ನಮ್ಮ ಕ್ರಮವಾಗಿತ್ತು.

ಅಚಲ : ನಿಮ್ಮ ಪತ್ರಿಕೆಯ ವಿಚಾರಗಳು ಆ ಕಾಲಕ್ಕೆ ತುಂಬ ಪ್ರಗತಿಪರವೆನ್ನಬಹುದಾದ ಸಿದ್ಧಾಂತದ ಚೌಕಟ್ಟನ್ನು ಪಡೆದಂತಿವೆ. ಆದ್ದರಿಂದ ಈ ಪತ್ರಿಕೆಯ ಹಿಂದಿನ ಚಿಂತನೆ ಯಾರದು?

'ವೀರಮಾತೆ'ಯಷ್ಟೇ ಅಲ್ಲ ವನಿತಾ ಸೇವಾ ಸಮಾಜ ವಿಡೀ ದಾದಾ ಅವರ ವೈಚಾರಿಕ ತಾತ್ವಿಕ ನಂಬಿಕೆಗಳ ಫಲ. ಹೆಣ್ಣುಮಕ್ಕಳು ಎಂದೂ ಪರಾವಲಂಬಿಗಳಾಗಬಾರದು, ಅವರು ತಮ್ಮ ಕಾಲಮೇಲೆ ತಾವು ನಿಲ್ಲಬೇಕೆಂಬ ದೃಢವಾದ ನಂಬಿಕೆಯಿದ್ದ ಲಕ್ಷ್ಮಣರಾವ್ ಪುರಾಣಿಕ ಅವರು ಐದಾರು ಹೆಣ್ಣುಮಕ್ಕಳೊಂದಿಗೆ ಪ್ರಾರಂಭಿಸಿದ ಸಂಸ್ಥೆ ಮುಂದೆ ಮಹಿಳಾಮಹಾವಿದ್ಯಾ

ಲಯವಾಗುವಂತೆ ಶಿಶುವಿಹಾರ, ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆ, ಟ್ರೇನಿಂಗ್ ಕಾಲೇಜು, ಕೈಗಾರಿಕೆ, ಹೊಲಿಗೆ ಮುಂತಾದ ಎಷ್ಟೋ ಶಿಕ್ಷಣಗಳಿಂದ ಸಮ್ಮನ್ನು ಬೆಳೆಸಿದರು. 'ವೀರಮಾತೆ' ಕೂಡ ಹಾಗೆ ಸ್ವತಂತ್ರ ವಿಚಾರಶಕ್ತಿಯನ್ನು ಹೆಣ್ಣುಮಕ್ಕಳಲ್ಲಿ ರೂಢಿಸುವ ಪ್ರಯತ್ನವಾಗಿತ್ತು. 1969ರಲ್ಲಿ ದಾದಾ ಮೃತರಾದರು. ಅನಂತರ ಕೆಲವು ಕಾಲ ನಡೆದು ಪತ್ರಿಕೆ 1970ರಲ್ಲಿ ನಿಂತಿತು.

ಅಚಲ : ದೇಶದ ಪ್ರಮುಖ ಆಗುಹೋಗುಗಳಿಗೆ ನಿಮ್ಮ ಪತ್ರಿಕೆಯ ಪ್ರತಿಕ್ರಿಯೆ ಹೇಗೆ? ಪ್ರಮುಖ ವ್ಯಕ್ತಿಗಳ ಜೊತೆಗಿನ ಸ್ಮರಣೀಯ ಘಟನೆಗಳೇನಾದರೂ ಹೇಳುವಿರಾ ?

[ಕರ್ನಾಟಕದ ಏಕೀಕರಣದ ಸಂದರ್ಭದಲ್ಲಿ, ಸ್ವಾತಂತ್ರ್ಯ ದೇಶಕ್ಕೆ ಲಭಿಸಿದ ಬಳಿಕ ದೇಶ ವಿಭಜನೆ ಸಂದರ್ಭದಲ್ಲಿ 'ವೀರಮಾತೆ' ಪತ್ರಿಕೆಯಲ್ಲಿನ ಸಂಪಾದಕೀಯಗಳು, ಪ್ರಮುಖ ಲೇಖನಗಳನ್ನು ಗಮನಿಸಿ, ಈ ಪ್ರಶ್ನೆ ಕೇಳಲಾಗಿತ್ತು. ಆದರೆ ನಾವು ಸಂದರ್ಶಿಸಿದ ಕಾಲಕ್ಕೆ ಆದೇ ತಾನೇ ಅನಾರೋಗ್ಯದಿಂದ ಚೇತರಿಸಿಕೊಳ್ಳುತ್ತಿದ್ದ ವೆಂಕಮ್ಮನವರು ಮಹರ್ಷಿಕರ್ವೆ, ಸುಭಾಷಚಂದ್ರಬೋಸ್, ಇಂದಿರಾಗಾಂಧಿ ಮತ್ತು ರಾಜಾ ಮಹಾರಾಜ ಸಿಂಗ್ (ಬೊಂಬಾಯಿ ಗೌರ್ನರ್) ಮುಂತಾದವರು ಸಮಾಜಕ್ಕೆ ಭೇಟಿಕೊಟ್ಟ ಸಂದರ್ಭಗಳನ್ನು ನೆನಪಿಸಿಕೊಂಡರು.]

---

**ನಾವು ಸಂದರ್ಶಿಸಿದ ಕಾಲಕ್ಕೆ, 'ವನಿತಾ ಸೇವಾ ಸಮಾಜ' ಸ್ವಾರ್ಥಸಾಧಕರ ಭ್ರಷ್ಟಾಚಾರ, ಸ್ವಹಿತಾಸಕ್ತಿಗಳ ರಾಜಕೀಯದ ಬೀಡಾಗಿತ್ತು. ಆ ಸಮಾಜದ ಹಿತಕ್ಕಾಗಿ ದುಡಿಯುತ್ತಿದ್ದವರಲ್ಲಿ ಅಭಿಜಾತ ಪ್ರಕಾಶನದ ಮಾಲೀಕರಾದ ಪತ್ರಕರ್ತ ಶಂಭೂರಾವ್ ವಾಮನರಾವ್ ಜಠಾರ್ ಅವರು ಹೋರಾಟವನ್ನು ಪ್ರಾರಂಭಿಸಿ, ನಡೆಸುತ್ತಿದ್ದರು. ಆ ಸಂಸ್ಥೆಯನ್ನು ಭ್ರಷ್ಟರ ಕೈ ತಪ್ಪಿಸಿ, ಸರ್ಕಾರವೇ ನೇರವಾಗಿ ವಹಿಸಿಕೊಳ್ಳುವಂತಾಗಲಿ ಎಂಬ ದಿಕ್ಕಿನ ಅವರ ಹೋರಾಟದಲ್ಲಿ ವೆಂಕಮ್ಮನವರೂ ತಮ್ಮನ್ನು ಸಕ್ರಿಯವಾಗಿ ತೊಡಗಿಸಿ ಕೊಂಡಿದ್ದರು. ಆದ್ದರಿಂದ ಅವರ ಮುಖ್ಯ ಕಳಕಳಿ ವನಿತಾ ಸೇವಾ ಸಮಾಜದ ಬಗ್ಗೆಯೇ ವ್ಯಕ್ತವಾಗುತ್ತಿದ್ದುದು ಸಹಜವಾಗಿತ್ತು.**

---

ನಮ್ಮ ಪ್ರಶ್ನೆಗಳೂ ಸಹಜವಾಗಿ ನಿಂತವು. ಅವರ ಮಾತುಗಳನ್ನು ಆಲಿಸತೊಡಗಿದೆವು. ಅವರ ಮಾತುಗಳಲ್ಲಿ ವನಿತಾ ಸೇವಾ ಸಮಾಜದ ಸಾಧನೆಗಳ ಬಗ್ಗೆ ಹೆಮ್ಮೆಯಿತ್ತು.

* ಹೆಣ್ಣುಮಕ್ಕಳಿಗೆ ಶಿಕ್ಷಣ, ಉದ್ಯೋಗದ ಅವಕಾಶ ನೀಡಿದ್ದರ ಫಲವಾಗಿ ಅನೇಕ ಅನಾಥೆಯರು ಸ್ವತಂತ್ರ ಉದ್ಯೋಗಗಳನ್ನು ನಡೆಸುವುದು ಸಾಧ್ಯವಾಯಿತು.

* ಈ ಹೆಣ್ಣುಮಕ್ಕಳನ್ನು ಮದುವೆಯಾಗಲು ಮುಂದಾದವರೊಂದಿಗೆ ಅನೇಕರ ಮದುವೆ ಮಾಡುವುದೂ ಸಾಧ್ಯವಾಯಿತು.

* ಸೋಷಿಯಲ್ ವೆಲ್‌ಫೇರ್ ಇಲಾಖೆಯ ಪ್ರಮುಖರು ಈ ಸಂಸ್ಥೆಗೆ ಭೇಟಿನೀಡುತ್ತಿದ್ದರು. ಹಾಗೆ ಶ್ರೀಮತಿ ದುರ್ಗಾಬಾಯಿ ದೇಶಮುಖ ಅವರು ಬಂದಿದ್ದಾಗ ಸಮಾಜದ ಕಾರ್ಯದಕ್ಷತೆಯನ್ನು ಗಮನಿಸಿ ಕೇಂದ್ರ ಸರ್ಕಾರದಿಂದ ಅನಾಥ ಹುಡುಗಿಯರಿಗೆ ಅನುದಾನ ದೊರಕಿಸಿಕೊಡಲು ನೆರವಾದರು.

* ಸರ್ಕಾರದ ಕೋರಿಕೆ ಮೇರೆಗೆ ಹಲವು ಸಲ ಅಪರಾಧಿ ಹೆಣ್ಣುಮಕ್ಕಳಿಗೂ ಸಮಾಜ ಆಶ್ರಯವನ್ನು ನೀಡುತ್ತಿತ್ತು.

* ಮುಂದೆ ರಾಜ್ಯ ಮಹಿಳಾ ಅಭಿವೃದ್ಧಿ ಯೋಜನೆಯ ಮೂಲಕ ಬಾಲವಾಡಿ, ನರ್ಸಿಂಗ್, ಹೊಲಿಗೆ ತರಬೇತಿ ಶಾಖೆಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ತೆರೆಯಲು ಅನುದಾನ ಲಭಿಸಿತ್ತು. ಅದರ ಫಲವಾಗಿ ಹೆಬ್ಬಳ್ಳಿ, ಮಾರಡಗಿ, ಸುಳ್ಳ, ಭಾಹಟ್ಟಿ, ಹೆಬ್ಸೂರು ಮುಂತಾದ ಕಡೆ ಗ್ರಾಮಾಂತರ ಶಾಖೆಗಳಲ್ಲಿ ಶಿಕ್ಷಣ ನೀಡಲು ಸಾಧ್ಯವಾಯಿತು. ಈ ಕಾರ್ಯಗಳಲ್ಲಿ ಹಳ್ಳಿಗಳ ಜನರು ಸಮಾಜಕ್ಕೆ ವಿಶೇಷ ಪ್ರೋತ್ಸಾಹ ನೀಡುತ್ತಿದ್ದರು. ಹೆಬ್ಬಳ್ಳಿಯಲ್ಲಿಯ ಬಾಲವಾಡಿ ಕಟ್ಟಡವನ್ನು ಹಳ್ಳಿಯವರೆಲ್ಲ ಬಂದು ಕಟ್ಟಿಕೊಟ್ಟಿದ್ದರು.

* ಆದರೆ ಎಲ್ಲ ಜನ ಸಂಪರ್ಕದ ಸಂದರ್ಭಗಳೂ ಇಷ್ಟೇ ಆಶಾದಾಯಕವಾಗಿರುತ್ತಿರಲಿಲ್ಲ. ಸಮಾಜಕ್ಕೆ ಧನ ಸಹಾಯ ನೀಡುತ್ತಿದ್ದ ದಾನಿಗಳು ಮಹಾರಾಷ್ಟ್ರ, ಉತ್ತರಕರ್ನಾಟಕಗಳಲ್ಲಿ ವಿಶೇಷವಾಗಿದ್ದರು. ಅಲ್ಲಿಗೆಲ್ಲ ಪ್ರಚಾರಕಿಯಾಗಿ ಜೊತೆಯವರೊಂದಿಗೆ ಹಣ ಸಂಗ್ರಹಿಸಲು ವೆಂಕಮ್ಮ ಸುತ್ತಾಡಬೇಕಾಗುತ್ತಿತ್ತು.

**(19ನೇ ಪುಟ ನೋಡಿ)**

# ದ್ರಾವಿಡ ಚಳುವಳಿಯಲ್ಲಿ ಮಹಿಳಾ ಪ್ರಶ್ನೆ

–ಎಸ್. ಆನಂದಿ

1926ರಲ್ಲಿ ಪೆರಿಯಾರ್ ಇ. ವಿ. ರಾಮಸ್ವಾಮಿ ನಾಯ್ಕರ್‌ರವರಿಂದ ಆರಂಭವಾದ 'ಸುಯಮರ್ರೈಯೈ ಇಯಕ್ಕಮ್ (ಆತ್ಮಗೌರವ ಚಳುವಳಿ) ತಮಿಳು ಸಮಾಜವನ್ನು ಹೆಚ್ಚು ಪ್ರಜಾಪ್ರಭುತ್ವದ ಮಾದರಿಗೊಳಪಡಿಸುವ ಪ್ರಯತ್ನದ್ದಾಗಿತ್ತು. ಈ ವಸ್ತುವನ್ನಾಧರಿಸಿ ಅನೇಕ ಮಾರ್ಕ್ಸ್‌ವಾದಿ ವಿದ್ವಾಂಸರು ಹಾಗೂ ಇತರ ವಿದ್ವಾಂಸರು ಚಾರಿತ್ರಿಕ ಸಂಶೋಧನೆಯನ್ನು ನಡೆಸಿರುವರಾದರೂ ಈ ಚಳುವಳಿಯು ಮಹಿಳಾ ಪ್ರಶ್ನೆಯನ್ನು ಕಂಡರಿಸಿದ ಬಗೆಗೆ ಹೆಚ್ಚು ಅಧ್ಯಯನ ನಡೆದಿಲ್ಲ.

ಸೋಷಿಯಲ್ ಸೈಂಟಿಸ್ಟ್ (216–17)ನಲ್ಲಿ ಪ್ರಕಟವಾದ ಎಸ್. ಆನಂದಿಯವರ 'ದ್ರಾವಿಡ ಚಳುವಳಿಯಲ್ಲಿ ಮಹಿಳಾ ಪ್ರಶ್ನೆ' ಎಂಬ ಲೇಖನದ ಕನ್ನಡ ಸಂಗ್ರಹ ರೂಪವಿದು.

**ಆತ್ಮಗೌರವ ಚಳುವಳಿಯ ರಾಜಕೀಯ ಗೊತ್ತುವಳಿಯಲ್ಲಿ ಮಹಿಳಾ ವಿಮೋಚನೆಯ ಪ್ರಶ್ನೆಯೇ ಒಂದು ಅತಿ ಮುಖ್ಯ ವಿಷಯವಾಗಿದ್ದರೂ, ಈ ಅಂಶವನ್ನು ಕುರಿತು ಹೆಚ್ಚು ಅಧ್ಯಯನ ನಡೆಯದೆ ಮೌನವಾಗಿರುವುದು ಒಂದು ಗಮನಾರ್ಹ ಸಂಗತಿಯೇ ಆಗಿದೆ. ಪುರುಷ ದೃಷ್ಟಿಕೋನದಿಂದ ಚರಿತ್ರೆಯನ್ನು ರಚಿಸುವುದರಿಂದಾಗಿ ಉಂಟಾಗಬಹುದಾದ ಈ ಕೊರತೆಯನ್ನು ತುಂಬುವ ಒಂದು ನಮ್ರವಾದ ಚಿಕ್ಕ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಬಯಸುವೆ. ಮಹಿಳಾ ಪ್ರಶ್ನೆಯನ್ನು ದ್ರಾವಿಡ ಚಳುವಳಿ ಹೇಗೆ ಗ್ರಹಿಸಿತು ಮತ್ತು ಯಾವ ರೀತಿ ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಬಯಸಿತು ಎಂಬುದರ ಬಗ್ಗೆಯೇ ಈ ಲೇಖನ ಉದ್ದೇಶಿಸಿದೆ.**

## ಪೆರಿಯಾರ್‌ರವರ ಚಿಂತನೆ

1924ರಲ್ಲಿ ಕಾಂಗ್ರೆಸ್‌ನೊಂದಿಗೆ ಸಂಬಂಧ ಕಡಿದುಕೊಂಡ ನಂತರ ಭಾವೋದ್ರೇಕದ ಭಾಷಣವನ್ನು ಬಿಟ್ಟು ಪೆರಿಯಾರ್‌ರವರು ತಮಿಳು ಸಮಾಜದ ಧರ್ಮ, ಜಾತೀಯ ಅಂತಸ್ತುಗಳು ಮತ್ತು ಪಿತೃಪ್ರಾಧಾನ್ಯತೆಯನ್ನು ಕುರಿತು ಮುಕ್ತವಾಗಿ ಗಟ್ಟಿಯಾಗಿ ಮಾತನಾಡಲು ಆರಂಭಿಸಿದರು. ಅವರ ಸಮಕಾಲೀನರಾದ ಗಾಂಧಿ ಮತ್ತು ಅವರ ಹಿಂದಿನವರಾದ ಸಿದ್ಧರು ಮತ್ತು ರಾಮಾನುಜರವರು ಸುಧಾರಣಾವಾದದ ಉತ್ಸಾಹವನ್ನು ವಿರೋಧಿಸಿದರು; ಗತಕಾಲದ ತಮಿಳು ಸಂಸ್ಕೃತಿಯ ಎಲ್ಲ ಪ್ರತಿಗಾಮಿ ಅಂಶಗಳನ್ನು ಕೊಡವಿ ಹೊರಬರಬೇಕೆಂದು ಕರೆಯಿತ್ತರು.

1928ರಲ್ಲಿ ನಡೆದ ದಕ್ಷಿಣ ಭಾರತದ ಸುಧಾರಣಾ ಸಮ್ಮೇಳನದಲ್ಲಿ ಮಾತನಾಡುತ್ತಾ ಈ ರೀತಿ ಹೇಳಿದರು : "ನನಗೆ ಸಾಮಾಜಿಕ ಸುಧಾರಣೆಯಲ್ಲಿ ಕ್ರಮೇಣವಾಗಿ ನಂಬಿಕೆ ಕುಸಿಯುತ್ತಿದೆ. ಕ್ರಾಂತಿಕಾರಿ ಬದಲಾವಣೆಯಲ್ಲಿ ನಂಬಿಕೆಯುಳ್ಳವರಿಗೆ, ಆತ್ಮಗೌರವ, ಸಮಾನತೆ ಮತ್ತು ಪ್ರಗತಿಯನ್ನು ಬಯಸುವವರಿಗೆ ಇರುವ ಪರ್ಯಾಯ ಪರಿಹಾರವೊಂದೇ. ಅದು ಕೇವಲ ಸುಧಾರಣೆಯಲ್ಲ ; ಆದರೆ ಸಾಂಪ್ರದಾಯಿಕ ರಚನೆಗಳನ್ನು ನಿರ್ನಾಮ ಮಾಡುವ ಹಾಗೂ ಕ್ರಾಂತಿಕಾರಕವಾದ ಪುನರ್ನಿರ್ಮಾಣ ಮಾಡಬೇಕಾದ ಕಾರ್ಯವಾಗಿದೆ.

ಈ ರೀತಿ ಸಂಪೂರ್ಣ ಕ್ರಾಂತಿಗಾಗಿ ಪೆರಿಯಾರ್‌ರವರ ಹಾತೊರೆಯುವಿಕೆ ಮಹಿಳಾ ಪ್ರಶ್ನೆಯನ್ನು ಕುರಿತ ಅವರ ದೃಷ್ಟಿಕೋನದಲ್ಲೂ ಪ್ರತಿಬಿಂಬಿತವಾಗುತ್ತದೆ. ಆತ್ಮಗೌರವ ಚಳುವಳಿಯ ವ್ಯಾಪ್ತಿಯಲ್ಲಿಯೇ ಮಹಿಳಾ ವಿಮೋಚನೆಯ ಸಾಂಪ್ರದಾಯಿಕ ವಿಷಯಗಳಾದ ಮಹಿಳಾ ವಿದ್ಯಾಭ್ಯಾಸ, ವಿಧವಾ ವಿವಾಹ ಮುಂತಾದವುಗಳಲ್ಲಿ ಕಾರ್ಯಪ್ರವೃತ್ತರಾಗಿದ್ದರೂ ಅವರು ಅಷ್ಟರಿಂದಲೇ ತೃಪ್ತರಾಗಲಿಲ್ಲ. ಈ ಚಳುವಳಿಗಳು ಯಶಸ್ವಿಯೆನಿಸಿದರೂ, ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಪಿತೃಪ್ರಾಧಾನ್ಯತೆಯನ್ನು ನಾಶ ಮಾಡುವಲ್ಲಿ ವಿಫಲವಾದವು. ಆದರೆ ಪೆರಿಯಾರ್‌ರವರು ಪಿತೃಪ್ರಾಧಾನ್ಯತೆಯ ಅಸ್ತಿಭಾರವಾದ ಏಕಪತಿ ವಿವಾಹದ ಕುಟುಂಬ ಹೆಣ್ಣಿನ ಮೇಲೆ ವಿಧಿಸಿರುವ ಪಾತಿವ್ರತ್ಯದ ಸೂತ್ರಗಳನ್ನು ಕುರಿತು ಪ್ರಶ್ನಿಸಿದರು. ಮಹಿಳಾ ವಿದ್ಯಾಭ್ಯಾಸವನ್ನು ಕುರಿತು ಪ್ರಚಾರ

ಮಾಡುವಾಗಲೂ ಅವರ ಮುಖ್ಯ ಪ್ರಹಾರ ಪಿತೃ ಪ್ರಾಧಾನ್ಯತೆಯ ರಚನೆಯ ವಿರುದ್ಧವೇ ಆಗಿತ್ತು. ಮಹಿಳೆಯರಿಗೆ ನೀಡುತ್ತಿರುವ ವಿದ್ಯಾಭ್ಯಾಸದ ಗುಣ ಮಟ್ಟ ಅಂದಿನಿಂದ ಇಂದಿನವರೆಗೂ ಅವಳನ್ನು ಒಬ್ಬ ಸುಶಿಕ್ಷಿತ ಗೃಹಿಣಿಯನ್ನಾಗಿ ತಯಾರು ಮಾಡುವುದೇ ಆಗಿದ. ಮಹಿಳಾ ವಿದ್ಯಾಭ್ಯಾಸವೆನ್ನುವುದು 'ಅರ್ಹ' ಗಂಡನನ್ನು ಪಡೆಯುವ ಜಾಹೀರಾತಾಗಿದೆ. ಮಹಿಳಾ ವಿದ್ಯಾಭ್ಯಾಸವು ಮಹಿಳೆಯರಿಗೆ ಉದ್ಯೋಗದ ಅವಕಾಶ ಗಳನ್ನು ನೀಡಿ ಅವರನ್ನು ಆರ್ಥಿಕವಾಗಿ ಸ್ವತಂತ್ರ ವ್ಯಕ್ತಿ ಗಳನ್ನಾಗಿಸಬೇಕೆಂಬ ಉದ್ದೇಶ ಹೊಂದಿರಬೇಕೆಂದು ವಾದಿಸುತ್ತಿದ್ದರು.

ಪಿತೃಪ್ರಾಧಾನ್ಯತೆಯನ್ನು ಉಳಿಸುವ, ಸ್ಥಿರಗೊಳಿಸುವ ಬಹುಮುಖ್ಯ ಅಂಶಗಳೆಂದರೆ ಮದುವೆ ಮತ್ತು ಕುಟುಂಬ ಗಳೇ ಆಗಿವೆ. ವಿವಾಹ ಸಂಸ್ಥೆಯಿಂದ ಹೆಣ್ಣು ಪುರುಷನ ಆಸ್ತಿಯ ಭಾಗವಾಗುವುದರಿಂದ ಆ ಸಂಸ್ಥೆಯನ್ನೇ ನಿಷೇಧಿಸಬೇಕು ಎಂಬುದು ಅವರು ಪ್ರತಿಪಾದಿಸಿದ ಬಹು ಮುಖ್ಯ ಅಂಶ.

1948ರಲ್ಲಿ ಮದ್ರಾಸ್‌ನ ವಿಕ್ಟೋರಿಯಾ ಹಾಲ್‌ನಲ್ಲಿ ಮಹಿಳೆಯರ ಸಭೆಯನ್ನುದ್ದೇಶಿಸಿ ಮಾತ ನಾಡಿದರು : "ಗಂಡ–ಹೆಂಡತಿಯರ ಸಂಬಂಧದ ಪರಿ ಕಲ್ಪನೆಯೇ ಒಂದು ರೀತಿಯ ಒಡೆಯ ಗುಲಾಮರ ಸಂಬಂಧದಂತೆ. ವಿವಾಹ ದರ್ಶನದ ಮುಖ್ಯ ಸೂತ್ರವೇ ಹೆಣ್ಣಿನ ದಾಸ್ಯವನ್ನು ಹೆಚ್ಚು ಒತ್ತಾಯಪೂರ್ವಕವಾಗಿ ಸ್ಥಾಪಿಸುವಂಥಹುದು. ಮನುಷ್ಯರು ಮಾತ್ರ ಒಂದು ಗಂಡು–ಒಂದು ಹೆಣ್ಣು ಎಂಬಂತಹ ಸೂತ್ರವನ್ನು ಯಾಕೆ ಹೊಂದಿರಬೇಕು. ಇಂತಹ ವಿವಾಹಗಳಿಂದ ಮತ್ತು ಪುರುಷರಿಂದ ಮಹಿಳೆಯರು ವಿಮುಕ್ತಿ ಪಡೆಯದ ಹೊರತು ನಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರೆ ಯುವುದಿಲ್ಲ."

ವಿವಾಹವನ್ನು ಒಂದು ಸಂಸ್ಥೆಯಾಗಿ ಪೆರಿಯಾರ್ ರವರು ಒಪ್ಪದಿದ್ದರೂ, ಸಮಾಜ ಸಮ್ಮತವಾದ ಒಂದು ರೀತಿಯ ಸಾಂಪ್ರದಾಯಿಕವಾದ ವಿವಾಹ ಸಂಬಂಧವನ್ನು ಅವರು ಪ್ರತಿಪಾದಿಸಿದರು. ಆದರೆ ಬಹುಮುಖ್ಯವಾಗಿ ವಿವಾಹಕ್ಕೆ ಸಂಬಂಧಿಸಿದ ಆಚರಣೆಗಳನ್ನು, ಧಾರ್ಮಿಕ ವಿಧಿಗಳನ್ನು ವಿರೋಧಿಸಿದರು. ವಧುವಿನ ಕೊರಳಿಗೆ ತಾಳಿಕಟ್ಟುವುದನ್ನು ವಿರೋಧಿಸಿದರು. ಅದು ಹೆಣ್ಣಿನ ಬಂಧನದ ಸೂಚಕ ಎಂದು ಭಾವಿಸಿದರು. ಹಿರಿಯರು ನಿರ್ಧರಿಸುವ ವಿವಾಹಗಳನ್ನು ವಿರೋಧಿಸಿದ ಪೆರಿಯಾರ್ ರವರು ಪ್ರೇಮವಿವಾಹವನ್ನು ಬೆಂಬಲಿಸಿದರು.

ಪೆರಿಯಾರ್‌ರವರು ಪ್ರಶ್ನಿಸಿದ ಮತ್ತೊಂದು ಮುಖ್ಯ ವಿಷಯವೆಂದರೆ, ಹೆಣ್ಣಿನ 'ಪಾತಿವ್ರತ್ಯ'. ಈ ಪಾತಿವ್ರ–ತ್ಯದ ಪರಿಕಲ್ಪನೆಯು ಹೆಣ್ಣಿನ ಸ್ವಾತಂತ್ರ್ಯವನ್ನು, ಮುಕ್ತ ವೈಚಾರಿಕತೆಯನ್ನು ದಮನಮಾಡಿ ಅವರನ್ನು ತೊತ್ತು ಗಳನ್ನಾಗಿ ಪರಿವರ್ತಿಸಿದೆ. ತಮಿಳು ಪುರಾಣಗ್ರಂಥಗಳಾದ 'ಶಿಲಪ್ಪಧಿಕಾರಂ' ಮತ್ತು 'ತಿರುಕ್ಕುರಳ್'ಗಳು ಪಾತಿವ್ರತ್ಯವನ್ನು ಹೆಣ್ಣಿನ ಅವಶ್ಯಕ ಗುಣವಾಗಿ ಚಿತ್ರಿಸಿರು ವುದನ್ನು ಪೆರಿಯಾರ್‌ರವರು ಕಟುವಾಗಿ ಟೀಕಿಸಿದ್ದಾರೆ. ಬಹುಪತಿತ್ವ ಮತ್ತು ವಿವಾಹ ವಿಚ್ಛೇದನಗಳು ಮಹಿಳೆ ಯರ ಶೋಷಣೆಗೆ ಪರಿಹಾರವಾಗಬಲ್ಲುವು ಎಂದು ಸೂಚಿಸುತ್ತಾರೆ. ವಿವಾಹವಿಚ್ಛೇದನದ ಕಾಯಿದೆಯನ್ನು ಮಾಡಬೇಕೆಂದು ಒತ್ತಾಯಿಸಿದುದರ ಜೊತೆಗೆ ಕಡ್ಡಾಯ ವಾಗಿ ಎಲ್ಲಾ ಮದುವೆಗಳನ್ನು ರಿಜಿಸ್ಟರ್ ಮಾಡಿಸ ಬೇಕೆಂದು ಒತ್ತಾಯಿಸಿದರು.

ಮದುವೆ ಮತ್ತು ಪಾತಿವ್ರತ್ಯವು ಬಹುಮುಖ್ಯವಾದ ಪಿತೃಪ್ರಾಧಾನ್ಯ ಸಂಸ್ಥೆಗಳಾದರೂ, ಪಿತೃಪಾಧಾನ್ಯತೆಯ ಗುಣವನ್ನು ಭಾಷೆ, ಸಾಹಿತ್ಯ, ಲಿಂಗಾಧಾರಿತ ಸಾಮಾಜೀ ಕರಣ ಮುಂತಾದ ಕ್ಷೇತ್ರಗಳಲ್ಲಿ ಅಂತರ್ಗತವಾಗಿರುವು ದನ್ನು ಕಾಣಬಹುದಾಗಿದೆ, ಎಂದು ಹೇಳುತ್ತಿದ್ದ ಪೆರಿಯಾರ್‌ರವರು ತಮ್ಮ ಬರವಣಿಗೆಗಳಲ್ಲಿ ಮತ್ತು ಭಾಷಣಗಳಲ್ಲಿ ತಮಿಳು ಭಾಷೆಯ ದೌರ್ಬಲ್ಯವನ್ನು ಕುರಿತು ಹೇಳುತ್ತಿದ್ದರು. 'ವಿಧವೆ' ಮತ್ತು 'ವೇಶ್ಯೆ' ಪದಗಳಿಗೆ ಪುರುಷಲಿಂಗ ಸೂಚಿ ಪದಗಳು ತಮಿಳು ಭಾಷೆ ಯಲ್ಲಿ ಇಲ್ಲವೆನ್ನುವುದನ್ನು ತುಚ್ಛ ಮನೋಭಾವದಿಂದ ಗಮನಿಸಿ 'ವಿಧವನ್' ಮತ್ತು 'ವಿಭಾಚರನ್' ಎಂಬ ಪದಗಳನ್ನು ರೂಪಿಸಿ ಬಳಕೆಗೆ ತಂದರು.

## ಆತ್ಮಗೌರವ ಚಳುವಳಿಯ ಚಟುವಟಿಕೆಗಳು

ಆತ್ಮಗೌರವ ಚಳುವಳಿಯ ಚಟುವಟಿಕೆಗಳಲ್ಲಿ ಬಹು ಮುಖ್ಯವಾದುದು ವಿವಾಹಪದ್ಧತಿಯನ್ನು ಅತ್ಯಂತ ಸರಳ ಗೊಳಿಸಿದುದು ಮತ್ತು ಹಿಂದೂ ಶಾಸ್ತ್ರವಿಧಿಗಳಿಂದ ಮುಕ್ತಗೊಳಿಸಿದುದೂ ಆಗಿದೆ. ಆತ್ಮಗೌರವ ಮದುವೆ ಗಳನ್ನು 1928ರಿಂದ ನಂತರದಲ್ಲಿ ಹಲವಾರು ಕಡೆಗಳಲ್ಲಿ ಬ್ರಾಹ್ಮಣೇತರ ಸಮುದಾಯದಲ್ಲಿ ನಡೆಸಲಾಯಿತು. ಈ

ಮದುವೆಗಳು ಅಂತರ್ಜಾತೀಯ ವಿವಾಹಗಳು ವಿಧವಾ ಪುನರ್ವಿವಾಹ ಹಾಗೂ ಹಿರಿಯರ ಒಪ್ಪಿಗೆಯ ವಿವಾಹಗಳೂ ಇದರಲ್ಲಿ ಸೇರಿದ್ದವು. ಬ್ರಾಹ್ಮಣ ಪುರೋಹಿತರಿಲ್ಲದೆ, ಶಾಸ್ತ್ರ ಮಂತ್ರಗಳಿಲ್ಲದೆ ಈ ವಿವಾಹಗಳು ನಡೆಯುತ್ತಿದ್ದವು. 'ತಾಳಿ'ಯನ್ನು ಕಟ್ಟುವ ಪದ್ಧತಿಯನ್ನು ಇಲ್ಲಿ ಕೈಬಿಡಲಾಯಿತು. ರಾಹುಕಾಲದಲ್ಲಿ, ಮಧ್ಯರಾತ್ರಿಯಲ್ಲಿ ಮದುವೆಯನ್ನು ನಡೆಸಲಾಗುತ್ತಿತ್ತು.

ಆತ್ಮಗೌರವ ಚಳುವಳಿಯ ಮತ್ತೊಂದು ಬಹುಮುಖ್ಯ ಚಟುವಟಿಕೆಯೆಂದರೆ ಮಹಿಳಾ ಸಮ್ಮೇಳನಗಳನ್ನು ವ್ಯವಸ್ಥೆಗೊಳಿಸುವುದು. ಮೊದಲ ಆತ್ಮಗೌರವ ಸಮ್ಮೇಳನವು 1929ರಲ್ಲಿ ಚೆಂಗಲ್‌ಪೇಟೆ (ಮದರಾಸ್ ಬಳಿ) ಯಲ್ಲಿ ನಡೆಯಿತು. ಈ ಸಮ್ಮೇಳನದಲ್ಲಿ ಉಳಿದ ವಿಷಯಗಳ ಜೊತೆಯಲ್ಲಿ ಶಾಸ್ತ್ರ ವಿಧಿಗಳನ್ನು ಕುರಿತೂ ಚರ್ಚಿಸಲಾಯಿತು. ಎರಡನೆಯ ಸಮ್ಮೇಳನವು 1930ರಲ್ಲಿ ಈರೋಡ್‌ನಲ್ಲಿ ನಡೆಯಿತು. ಮಹಿಳೆಯರ ವಿಮೋಚನೆ ಮಹಿಳೆಯರ ಸಂಘಟಿತ ಹೋರಾಟದಿಂದ ಮಾತ್ರವೇ ಸಾಧ್ಯ ಎಂಬುದನ್ನು ಪೆರಿಯಾರ್‌ರವರು ಒತ್ತಿ ಹೇಳುತ್ತಿದ್ದರು. ಈ ಸಮ್ಮೇಳನಗಳಲ್ಲಿ ಸಮರ್ಥವಾಗಿ ಕಾರ್ಯ ನಿರ್ವಹಿಸಿದ, ನೇತೃತ್ವ ವಹಿಸಿದ ಹಲವಾರು ನಾಯಕಿಯರನ್ನು ನಾವು ಕಾಣುತ್ತೇವೆ.

ಈ ಎಲ್ಲ ವಿಷಯಗಳ ಚರ್ಚೆಯ ನಂತರವೂ ಆತ್ಮಗೌರವ ಚಳುವಳಿಯ ಪ್ರಭಾವ, ಪರಿಣಾಮಗಳು ಎಲ್ಲ ಕಡೆಗಳಲ್ಲೂ ಎಲ್ಲ ಸಮಯದಲ್ಲೂ ಒಂದೇ ರೀತಿ ಇರಲಿಲ್ಲ. ಪಿತೃಪ್ರಾಧಾನ್ಯತೆಯ ವಿರುದ್ಧದ ಹೋರಾಟವು ಚಳುವಳಿಯ ಕಡೆಯ ದಿನಗಳಲ್ಲಿ ತುಂಬ ದುರ್ಬಲವಾಗಿತ್ತು. ಚಳುವಳಿಯ ಆರಂಭದಲ್ಲಿ ಮಹಿಳೆಯರನ್ನು 'ಸಂಗಾತಿ' ಗಳೇ ಎಂದು ಸಂಭೋದಿಸಲಾಗುತ್ತಿತ್ತು. 1944ರ ನಂತರದಲ್ಲಿ ಮಹಿಳಾ ಕಾರ್ಯಕರ್ತರನ್ನು 'ಭಗಿನಿ' ಹಾಗೂ 'ಮಾತೆ'ಯರೇ ಎಂದು ಸಂಭೋದಿಸುವುದು ರೂಢಿಗೆ ಬಂತು. ಮಹಿಳೆಯರನ್ನು ಅವರ ತಂದೆಯ ಹಾಗೂ ಗಂಡಂದಿರ ಸಾಧನೆಯೊಂದಿಗೆ ಗುರುತಿಸುವುದು ರೂಢಿಯಲ್ಲಿ ಬಂತು. 1945ರಲ್ಲಿ ತಿರುಚಿನಾಪಲ್ಲಿಯಲ್ಲಿ ನಡೆದ ದ್ರಾವಿಡ ಚಳುವಳಿಯ ಸಮ್ಮೇಳನದಲ್ಲಿ ಮಹಿಳೆಯರನ್ನು ಕುರಿತು ಒಂದೇ ಒಂದು ಅಂಶವನ್ನೂ ಚರ್ಚಿಸಲಿಲ್ಲ. ●

---

## ಚರಿತ್ರೆಯಲ್ಲಿ....

ಆಗ್ನೊಡೈಸ್ (Agnodice) ಕ್ರಿಸ್ತ ಪೂರ್ವ ನಾಲ್ಕನೇ ಶತಮಾನದಲ್ಲಿದ್ದ ಗ್ರೀಕ್ ಮಹಿಳೆ. ಈಕೆ ಪುರುಷರಿಗಷ್ಟೆ ಮೀಸಲಿದ್ದ ಪ್ರಸಿದ್ಧ ವೈದ್ಯ ಹೀರೋಫಿಲಸ್ (Herophilos)ನ ತರಗತಿಗಳಿಗೆ ಗಂಡು ವೇಷದಲ್ಲಿ ಪ್ರವೇಶಿಸಿ ವೈದ್ಯಶಾಸ್ತ್ರವನ್ನು ಕಲಿತಳು. ನಂತರ ಪುರುಷ ವೇಷದಲ್ಲಿಯೇ ನಿಜಲಿಂಗವನ್ನು ಮರೆಮಾಚಿಕೊಂಡು 'ಸ್ತ್ರೀ ತಜ್ಞ'ಳಾಗಿ ತನ್ನ ವೈದ್ಯ ವೃತ್ತಿಯನ್ನು ಪ್ರಾರಂಭಿಸಿದಳು. ಈಕೆಯ ಪ್ರಸಿದ್ಧಿಯನ್ನು ಕಂಡು ಕರುಬಿದ ವೈದ್ಯರು, 'ಸ್ತ್ರೀಯರನ್ನು ಕೆಡಿಸುತ್ತಿದ್ದಾನೆ' ಎಂಬ ಆರೋಪ ಹೊರಿಸಿ ವಿಚಾರಣೆಗೆ ಎಳೆದಾಗ, ಆಗ್ನೊಡೈಸ್ ತನ್ನ ಜೀವ ಉಳಿಸಿಕೊಳ್ಳಲು ತಾನು ಹೆಣ್ಣು ಎಂಬುದನ್ನು ಬಯಲು ಮಾಡಲೇಬೇಕಾಯಿತು. ನಿಜಸ್ಥಿತಿ ಹೊರಬಿದ್ದೊಡನೆ 'ಸ್ತ್ರೀಯರನ್ನು ಕೆಡಿಸುವ' ಆರೋಪ ಏನೋ ಕಳಚಿಕೊಂಡಿತು, ಆದರೆ ಅವಳೆದುರು ಹೊಸ ಫಿರ್ಯಾದೆ ನಿಂತಿತ್ತು, –ಕಾನೂನಿನ ಪ್ರಕಾರ ಪುರುಷರಿಗಷ್ಟೇ ಮೀಸಲಿದ್ದ ವೃತ್ತಿಯನ್ನು ಕೈಗೊಂಡ ಅಖಂಡ ಅಪರಾಧದ ಆಪಾದನೆ ! **–ನೇಮಿಚಂದ್ರ**

ತನ್ನ ಕೆಲಸದಿಂದ ಒಂದು ದಿನ ಕೂಡಾ ರಜೆ ತೆಗೆದುಕೊಳ್ಳದ ಏಕೈಕ ವ್ಯಕ್ತಿ–

ಸಾವಕ್ ಪಟೇಲ್ ಎಂಬಾಕೆ. ಈಕೆ ಜಮ್‌ಶೆಡ್‌ಪುರದ ಲೊಯೊಲಾ ಶಾಲೆಯ ಪ್ರಾಧ್ಯಾಪಕಿ. ತನ್ನ 34 ವರ್ಷದ ಉದ್ಯೋಗದಲ್ಲಿ ಒಮ್ಮೆ ಕೂಡಾ ರಜೆ ತೆಗೆದುಕೊಂಡಿಲ್ಲ.

★ ★ ★ ★

ಬಿ. ಎ. ಪರೀಕ್ಷೆಯಲ್ಲಿ ಪಾಸುಮಾಡಿದ ಭಾರತದ ಮೊಟ್ಟ ಮೊದಲ ಮಹಿಳೆಯರು ಕದಂಬಿನಿ ಗಂಗೂಲಿ ಮತ್ತು ಚಂದ್ರಮುಖಿ ಬಸು. ಇವರು 1883ರಲ್ಲಿ ಕಲಕತ್ತಾ ವಿಶ್ವವಿದ್ಯಾಲಯದಿಂದ ಪದವೀಧರರಾದರು. ಚಂದ್ರಮುಖಿ 1884ರಲ್ಲಿ ಇಂಗ್ಲಿಷ್‌ನಲ್ಲಿ ಎಂ. ಎ. ಮಾಡಿ ಮೊಟ್ಟ ಮೊದಲ ಮಹಿಳಾ ಸ್ನಾತಕೋತ್ತರ ಪದವೀಧರಳಾದಳು. ಕದಂಬಿನಿ ವೈದ್ಯಶಾಸ್ತ್ರವನ್ನು ಓದಿ ಡಿಪ್ಲೊಮಾ ಪಡೆದು, 1888ರಲ್ಲಿ ಮೊಟ್ಟ ಮೊದಲ ಮಹಿಳಾ ವೈದ್ಯಳಾದಳು. ಕಲಕತ್ತೆಯ 'ಈಡನ್ ಆಸ್ಪತ್ರೆ'ಯಲ್ಲಿ ಈಕೆ ದುಡಿದಳು. ಮೊಟ್ಟ ಮೊದಲ ವೈದ್ಯಶಾಸ್ತ್ರದ ಪದವೀಧರೆಯರು, ಬಿದ್ದುಮುಖಿ ಬೋಸ್ ಹಾಗೂ ಮೇರಿ ವರ್ಜೀನಿಯಾ ಮಿಟರ್ ಇವರು 1889ರಲ್ಲಿ ಕಲ್ಕತ್ತೆಯಿಂದ ಪದವೀಧರರಾದರು. ●

# ಸೀರೆಯಲ್ಲಿ ಸಿಕ್ಕಿಕೊಂಡವರು

—ನೇಮಿಚಂದ್ರ

ಹೆಣ್ಣಿಗೆ ನೀಳ ಜಡೆ, ಮೈ ತುಂಬಾ ಸೀರೆ ಸುಂದರ ವೆಂದು ಸಾಮಾನ್ಯ ಅನಿಸಿಕೆ. ಈ ಸೌಂದರ್ಯದ ಕಲ್ಪನೆ ಬಹಳಷ್ಟು ಸ್ತ್ರೀಯರ ಅಭಿರುಚಿಯನ್ನು ಸೀಮಿತಗೊಳಿಸಿರುವುದೂ ಉಂಟು. ಆದರೆ ಗಮನಿಸಿದ್ದೀರಾ, ಸ್ತ್ರೀಯರ ಉಡುಪು ಎಷ್ಟು ಅಸುರಕ್ಷಿತವಿದೆ ಎಂದು. ಸೀರೆ ಭಾರತೀಯ ನಾರಿಗೆ ಭೂಷಣ, ಸೀರೆಯಷ್ಟು ಸುಂದರವಾದ ಉಡುಪು ಮತ್ತೊಂದಿಲ್ಲ ಅನ್ನುವುದು ಸಾಮಾನ್ಯ ಅನಿಸಿಕೆ. ಒಂದು ರೀತಿಯಲ್ಲಿ ಸೀರೆಯ ಸೊಗಸು ಇರುವುದೇ, ಅದರ ವಿವಿಧ ಬಗೆಯಲ್ಲಿ ಉಡುವ ಸಾಧ್ಯತೆಯಿಂದ. ಮೈ ತುಂಬಾ ಸೆರಗು ಹೊದ್ದು ಉಡಬಹುದಾದಂತೆ, ಮುಕ್ಕಾಲು ಪಾಲು ತೆರೆದೂ ಉಡಬಹುದಾದ ಸಾಧ್ಯತೆ ಇನ್ನಾವ ಉಡುಪಿಗಿದೆ ? ಬಹುಶಃ ನಾಜೂಕಾಗಿ, ಸುಂದರವಾಗಿ ಮದುವೆ–ಮುಂಜಿಗೆ ಹೋಗಿ ಬರಲು ಸೀರೆ ಸೊಗಸು. ಆದರೆ ಅಡಿಗೆ ಮನೆಯಲ್ಲಿ, ಹೊಲದಲ್ಲಿ, ಕಾರ್ಖಾನೆಯಲ್ಲಿ ಯಂತ್ರಗಳೊಡನೆ ದುಡಿವ ಮಹಿಳೆಗೆ ಮೊಳ ಮೊಳ ಸೀರೆ, ಹಾರಿ ನಿಲ್ಲುವ ಸೆರಗು, ನೆರಿಗೆ ಅಪಾಯಕಾರಿ ಅನ್ನದಿದ್ದರು ಅನಾನುಕೂಲವಂತೂ ಖಂಡಿತಾ ಹೌದು. ಈ ಸೀರೆ ಉಟ್ಟು ಹಿಮಾಲಯ ಏರುವುದು ಬೇಡ, ಕಡೆಗೆ ಬಿ.ಟಿ.ಎಸ್.ಗೆ ಹಾರಿ ಜಿಗಿಯಲೂ ತೊಡಕಾದದ್ದು ಅನುಭವಕ್ಕೆ ಬಂದಿಲ್ಲವೆ ? ಸ್ತ್ರೀಯರಿಗೆ ಇಂಥಾ ಫಜೀತಿಯ ಉಡುಪನ್ನು ಅಂಟಿಸುವಲ್ಲಿ ನಮ್ಮ ಸಮಾಜ ಸ್ತ್ರೀಯರ ದೈಹಿಕ ಚಟುವಟಿಕೆಗಳನ್ನು ಮುದುಡಿಡಲು ಬಯಸಿತ್ತೆ, ಎಂಬ ಗುಮಾನಿ. ಉತ್ತರ ಭಾರತದ ಸಲ್ವಾರ್–ಕಮೀಜ್ ಇಂಥಾ ಅನಾನುಕೂಲಗಳಿಂದ ತಪ್ಪಿಸಿಕೊಂಡಿದ್ದರೂ, ಅದರೊಡನೆ ಸಂಪ್ರದಾಯದ ಪ್ರಕಾರ ಅರ್ಧ ಸೀರೆಯಷ್ಟು ದುಪ್ಪಟ್ಟ ಹೊದೆಯುವ, ಹಿರಿಯರೆದುರು, ಪರಪುರುಷರೆದುರು ಅದನ್ನು ಎಳೆದೆಳೆದು ತಲೆ ಮೇಲೆ ನಿಲ್ಲಿಸಿಕೊಳ್ಳುವ ಫಜೀತಿ ಸಲ್ವಾರ್–ಕಮೀಜನ ಲಾಭಗಳನ್ನೆಲ್ಲ ಸೊನ್ನೆಯಾಗಿಸಬಲ್ಲುದು. ಇತ್ತೀಚೆಗೆ ರೈಲು ಪ್ರಯಾಣದಲ್ಲಿ ಮೂರನೆ ಬರ್ತ್ ಮೇಲೆ ಏರಿದ್ದ ಮಹಿಳೆಯ ದುಪ್ಪಟ್ಟ, ಮೇಲಿನ ಫ್ಯಾನಿಗೆ ಸಿಕ್ಕಿಕೊಂಡು ಅವಳಿಗೆ ನೇಣಾಗುವುದರಲ್ಲಿತ್ತು. ದ್ವಿಚಕ್ರ ವಾಹನಗಳಲ್ಲಿ ಸೀರೆ ಸಿಕ್ಕಿಕೊಂಡು ಬಿದ್ದವರ ಲೆಖ್ಖ ಇರಲಾರದು. ಅಡಿಗೆ ಮನೆಯಲ್ಲಿ ಸೀರೆ–ದುಪ್ಪಟ್ಟ ಗಳಿಂದ ಆದ ಅಪಘಾತಗಳ ಸಂಖ್ಯೆ ಕಡಿಮೆಯದಲ್ಲ. ಸಾಲದ್ದಕ್ಕೆ ಉದ್ದನೆಯ ಕೂದಲು ಭಾರತೀಯ ಮಹಿಳೆಯ ಸೌಂದರ್ಯದ ಪರಾಕಾಷ್ಠೆ ಎಂದು 'ನಾಗವೇಣಿ' 'ನೀಳವೇಣಿ'ಗಳನ್ನು ಹಾಡಿ ಹೊಗಳುವ, ಹೆಂಗಸರು ಕೂದಲಿಗೆ ಕತ್ತರಿ ತಾಗಿಸುವುದೂ ಅಪಶಕುನ ಎಂಬ ಸಂಪ್ರದಾಯಗಳು ಬೇರೆ ಇವೆ, ಸೂಕ್ಷ್ಮ ನಿರ್ಬಂಧನಗಳಂತೆ. ಇತ್ತೀಚೆಗೆ ಜಯಪುರದ ವೈದ್ಯರು ಹೊಲಗಳಲ್ಲಿ ದುಡಿವ ಹೆಂಗಸರ ಉದ್ದನೆಯ ಕೂದಲು ಯಂತ್ರಗಳಲ್ಲಿ ಸಿಕ್ಕಿಕೊಂಡು ಕೂದಲು ಚರ್ಮದ ಸಮೇತ ತಲೆಯಿಂದ ಕಿತ್ತುಬಂದಿರುವ ಯಥೇಚ್ಛ ಸಂದರ್ಭಗಳನ್ನು ವಿವರಿಸಿದ್ದಾರೆ. ಒಂದೇ ತಿಂಗಳು ಐವರು ಮಹಿಳೆಯರು ಇಂಥಾ ಅಪಘಾತಗಳಿಗೆ ಒಳಗಾಗಿ, ಜಯಪುರದ ಎಸ್.ಎಮ್.ಎಸ್. ಆಸ್ಪತ್ರೆಗೆ ದಾಖಲಾದರು. ಇಂಥಹುದೇ ಕೇಸುಗಳು ಬೇರೆ ರಾಜ್ಯದಿಂದಲೂ ತಿಳಿದು ಬಂದಿವೆ. ಕೂದಲು ತಲೆಬುರುಡೆಯಿಂದ ಕಿತ್ತು ಬರುವ ಅನೇಕ ಸಂದರ್ಭದಲ್ಲಿ, ಇಂಥಾ ರಕ್ತಸ್ರಾವ ಪ್ರಾಣಾಪಾಯವೂ ಆಗಿರುತ್ತದೆ.

ಎಲ್ಲಿಯೋ ನಮ್ಮ ಶತಮಾನಗಳ ಸೌಂದರ್ಯ ಪ್ರಜ್ಞೆಯ ಕಲ್ಪನೆ ಕೊಂಚ ಬದಲಾಗಬೇಕೇನೋ ಅನಿಸುತ್ತದೆ. ಕಡೆಯ ಪಕ್ಷ ದುಡಿತದ ಸಮಯದಲ್ಲಿ, ಕುರ್ಚಿಯಲ್ಲಿ ಕುಳಿತು ಮಾಡುವ ಅಚ್ಚುಕಟ್ಟಿನ ಕೆಲಸವಾಗಿರದ ಸಮಯದಲ್ಲಾದರೂ ಮಹಿಳೆಯರು ಒಂದಿಷ್ಟು ಮುಜುಗರ ಬಿಟ್ಟು ಉದ್ಯೋಗಕ್ಕೆ ಅನುಕೂಲಕರ ಉಡುಪನ್ನು ಧರಿಸಬಹುದು. ಪುರುಷರ ಪ್ಯಾಂಟ್–ಶರ್ಟ್, ಕ್ಯಾಪ್ ಎಷ್ಟು ಸುರಕ್ಷಿತ ನೋಡಿದ್ದೀರ ? ಅಂದರೆ ಹೆಣ್ಣು ಗಂಡಾಗಬೇಕೆಂಬ ಛಲವಲ್ಲ. ಹೊಲ ಮನೆಗಳಲ್ಲಿ ದುಡಿವ ಮಹಿಳೆಯ ಸುರಕ್ಷಣೆಯ ದೃಷ್ಟಿಯಿಂದ ನಮ್ಮ ಉಡುಪು ಒಂದಿಷ್ಟು ಬದಲಾದರೆ ಒಳ್ಳೆಯದು.

## ಸಿಲಿಕಾನ್ ಸಿಕ್ಕಿಸಿಕೊಂಡವರು

ಉಡುಪಿನ ಬಗ್ಗೆ ಇಷ್ಟು ಕತೆಯಾದರೆ, ಹೆಣ್ಣಿನ ದೇಹ ಸೌಂದರ್ಯದ ಬಗ್ಗೆಯಂತೂ ಕವಿಗಳ–ಕತೆಗಾರರ ಕಲ್ಪನೆ ದೇವರಿಗೇ ಪ್ರೀತಿ. ಕುಂಭನಿತಂಬ, ಕುಂಭ ಕುಚಗಳನ್ನು ಮೆಚ್ಚುವ ಕೂಚುಭಟ್ಟರು ಪ್ರಪಂಚದ ಎಲ್ಲೆಡೆಯಲ್ಲೂ ಇದ್ದಾರೆ. ಇಂಥಾ ಘನಸ್ತನಗಳನ್ನು ಹುಟ್ಟಿನಿಂದಲೇ ಪಡೆದು ಬರದ ಹೆಣ್ಣು ತನ್ನಲ್ಲೇನೊ 'ಅಂಗಊನತೆ' ಇದೆ ಎಂದು ಭಾವಿಸಿದರೂ ಅಚ್ಚರಿಯಲ್ಲ. ಪತ್ರಿಕೆಗಳಲ್ಲಿ ವೈದ್ಯರು ಉತ್ತರಿಸುವ ಅಂಕಣಗಳನ್ನು ನೋಡಿ, ಅರ್ಧ ಹುಡುಗಿಯರ ಪತ್ರಗಳು, 'ನನ್ನ ಸ್ತನ ಸಣ್ಣದಿದೆ, ಹಿಗ್ಗಿಸುವ ಬಗೆ ಹೇಗೆ?' ಎಂದು ಕೇಳುತ್ತವೆ. ಈ ವಿಪರೀತದ ಕಾಳಜಿ ವಿದೇಶೀಯರಲ್ಲಿ ಸ್ತನದೊಳಗೆ 'ಸಿಲಿಕಾನ್ ಚೀಲ'ವನ್ನು ಸಿಕ್ಕಿಸಿಕೊಳ್ಳುವಂತೆ ಮಾಡಿತು. ಇಂದು ಭಾರತದಲ್ಲೂ ಸಿಲಿಕಾನ್ ಚೀಲಗಳು ಸದ್ದಿಲ್ಲದೆ ಸ್ತನದೊಳಗಡಗುತ್ತಿವೆ. ಅಮೆರಿಕೆಯಲ್ಲಿ 20 ಲಕ್ಷ ಮಹಿಳೆಯರು ಶಸ್ತ್ರಕ್ರಿಯೆಗೆ ಒಳಗಾಗಿ, ಕೃತಕ ಚೀಲ ಗಳನ್ನು ಅಳವಡಿಸಿಕೊಂಡಿದ್ದಾರೆ ಎಂದರೆ ನಂಬುತ್ತೀರಾ? ಅಲ್ಲಿ ಪ್ಲಾಸ್ಟಿಕ್ ಸರ್ಜನ್ನರಿಗಿರುವ ಬೇಡಿಕೆ ಬೇರಾರಿಗೂ ಇರಲಾರದೇನೋ. ಸಣ್ಣ ಸ್ತನಗಳು ತಟ್ಟನೆ ಸರಿಪಡಿಸ ಬೇಕಾದ ಅಂಗವಿಕಲತೆಯೋ, ಶೀಘ್ರ ಗುಣಪಡಿಸಬೇಕಾದ ರೋಗವೋ ಎಂಬಂತೆ ಸಿಲಿಕಾನ್ ಚೀಲಗಳ ಪ್ರಚಾರ ನಡೆಯಿತು. ಇಂಥಾ ಪ್ರಚಾರಕ್ಕೆ ಅಧಿಕ ಸಂಖ್ಯೆಯಲ್ಲಿ ಮಹಿಳೆಯರು ಗುರಿಯಾದುದು ವಿಷಾದ.

ಆದರೆ ಎದೆಯೊಳಗೆ ಕುಳಿತ ಈ ಸಿಲಿಕಾನ್ ಚೀಲಗಳು 'ಟೈಮ್ ಬಾಂಬ್'ನಂತೆ ಎನ್ನುವವರಿದ್ದಾರೆ. ಅಮೆರಿ–ಕೆಯ 'ಫೊಡ್ ಅಂಡ್ ಡ್ರಗ್' ಪ್ರಾಧಿಕಾರದ ವಿಜ್ಞಾನಿ ಗಳು, 'ಮೆಮೆ' ಮತ್ತು 'ರೆಪ್ಲಿಕಾನ್' ಮಾದರಿಯ ಚೀಲಗಳು, ಪಾಲಿಯುರೇಥೇನಿನ ಮೇಲ್ಪದರನ್ನು ಪಡೆ ದಿದ್ದು, ಈ ಪಾಲಿಯುರೇಥೇನ್ ದೇಹದೊಳಗೆ, TDA ಎಂಬ ವಸ್ತುವಾಗಿ ವಿಭಜಿಸಲ್ಪಡುತ್ತದೆ ಎಂದಿದ್ದಾರೆ. ಈ ರಸಾಯನ ಪ್ರಯೋಗಶಾಲೆಯಲ್ಲಿ ಇಲಿಗಳಲ್ಲಿ ಕ್ಯಾನ್ಸರ್ ತಗುಲಲು ಕಾರಣವಾಗಿದೆ. ಹೀಗಾಗಿ ಇಂಥಾ ಚೀಲಗಳನ್ನು ಪಡೆದ ಮಹಿಳೆಯರಿಗೆ ಕ್ಯಾನ್ಸರ್ ಬರುವ ಸಾಧ್ಯತೆ, ಸಂಭವನೀಯತೆ ಹೆಚ್ಚಿದೆ ಎನ್ನಲಾಗಿದೆ. ಈ 'ಮೆಮೆ' ಮತ್ತು 'ರೆಪ್ಲಿಕಾನ್' ಚೀಲಗಳು, ಸಾಮಾನ್ಯ ಸಿಲಿಕಾನ್ ಚೀಲಗಳಿಗಿಂತ ಹೆಚ್ಚು ಬೇರೆಯವಲ್ಲ. ಆದರೆ ಇವಕ್ಕೆ ಪಾಲಿಯುರೇಥೇನಿನ ಒಂದು ಪದರು ಸೇರಿದೆ. ಹಳೆಯ ಸಿಲಿಕಾನ್ ಚೀಲಗಳು ಸುತ್ತಲಿನ ಸ್ತನದ ಅಂಗಾಂಶವನ್ನು ಬಿಗಿದುಕೊಂಡು ಗಟ್ಟಿಯಾಗಿಸುತ್ತಿದ್ದುದ ಲ್ಲದೆ, ಕಾಲಕ್ರಮೇಣ ಸ್ತನದ ಆಕಾರವನ್ನು ಕೆಡಿಸುತ್ತಿದ್ದ ಪ್ರಸಂಗಗಳೂ ಉಂಟು. ಆದರೆ ಪಾಲಿಯುರೇಥೇನ್ ಪದರು ಇದನ್ನು ತಡೆಗಟ್ಟಿತು, ಹಾಗೂ ಸ್ತನಗಳಿಗೆ ಸ್ವಾಭಾವಿಕ ಮೃದು ಸ್ಪರ್ಶದ ಅನುಭವ ನೀಡಿತು. ಆದರೆ ದೇಹದೊಳಗೆ ಪ್ರವೇಶಿಸಿದ ಪಾಲಿಯುರೇಥೇನ್ ಮೇಲೆ, ದೇಹದ ನಿರೋಧಕ ವ್ಯವಸ್ಥೆಯ ಜೀವಕೋಶ ಗಳು ದಾಳಿ ಮಾಡಿ, ಅದನ್ನು ತುಂಡುತುಂಡಾಗಿಸಿ ನಾಶ ಮಾಡುತ್ತವೆ. ಹೀಗಾಗಿ ಏಳೆಂಟು ವರ್ಷಗಳಲ್ಲಿ, ಶೇಕಡಾ 10—30 ಪಾಲಿಯುರೇಥೇನ್ ವಸ್ತು ದೇಹದೊಳಗೆ ಮಾಯವಾಗುತ್ತದೆ.

1960ರ ದಶಕದಲ್ಲಿ ಸಿಲಿಕಾನ್ ಚೀಲಗಳು ಸ್ತನಗಳನ್ನು ಪ್ರವೇಶಿಸಿದಾಗಲೇ ಅವುಗಳ ಸುರಕ್ಷತೆಯ ಬಗ್ಗೆ ಅನೇಕ ಪ್ರಶ್ನೆಗಳೆದ್ದಿದ್ದವು. ಅವನ್ನು ಪಡೆದ ಮಹಿಳೆಯರು (ಪುರುಷರೂ ಇದ್ದಾರೆ, ವಿಶಾಲ ಎದೆಯನ್ನು, ಉಬ್ಬಿದ ಮಾಂಸಖಂಡಗಳನ್ನು ಸಿಲಿಕಾನ್ ಬಳಸಿ ಪಡೆದವರು) ಅನೇಕ ತೊಂದರೆಗಳ ಬಗ್ಗೆ ದೂರು ಹೇಳಿದ್ದರು. ಈ ಚೀಲಗಳು ಸ್ತನದಲ್ಲಿದ್ದರೆ, ಕ್ಯಾನ್ಸರ್ ರೋಗವನ್ನು ಸೂಕ್ಷ್ಮ ಹಂತದಲ್ಲಿ, ಆರಂಭದಲ್ಲೇ ಪತ್ತೆಹಚ್ಚುವುದಕ್ಕೆ ತಡೆಯಾಗುವ, ತಡವಾಗುವ ಸಾಧ್ಯತೆಯೂ ಇದೆ. ಇಂಥೆಲ್ಲಾ ಹೊಸ ವೈದ್ಯಕೀಯ ಮಾಹಿತಿ, ಇದೀಗ ಸಿಲಿಕಾನ್ ಚೀಲ ಪಡೆದವರಲ್ಲಿ ಭಾರೀ ಭೀತಿ ಹುಟ್ಟಿಸಿದೆ. ಅಷ್ಟೇ ಅಲ್ಲ, ಈ ಚೀಲಗಳ ತಯಾರಕರನ್ನು ಕೋರ್ಟಿ ಗೆಳೆದವರಿದ್ದಾರೆ. ನ್ಯೂಯಾರ್ಕಿನ ಮಹಿಳೆಯೊಬ್ಬಳು ಪಾಲಿಯುರೇಥೇನ್ ತನ್ನ ಸ್ತನದ ಕ್ಯಾನ್ಸರಿಗೆ ಕಾರಣ ಎಂದು ಸಾಧಿಸಿ, 45 ಲಕ್ಷ ಡಾಲರುಗಳನ್ನು ಪರಿಹಾರ–ವಾಗಿ ಪಡೆದಿದ್ದಾಳೆ.

ವೈದ್ಯರು ಮಾತ್ರ 'ಇಷ್ಟೆಲ್ಲ ಗದ್ದಲ–ಭಯದ ಅಗತ್ಯ ವಿಲ್ಲ, ಸಿಲಿಕಾನ್ ಪಡೆದವರೆಲ್ಲರಿಗೂ ಕ್ಯಾನ್ಸರ್ ಬರುವ, ಇಲ್ಲ ತೊಂದರೆಯಾಗುವ ಸಾಧ್ಯತೆ ಸಣ್ಣದು' ಎಂದು ಕೂಗುತ್ತಿದ್ದಾರೆ. ಸಾಧ್ಯತೆ ಎಷ್ಟೇ ಇರಲಿ, ಚಿಕ್ಕದು ಸುಂದರವೋ, ದೊಡ್ಡದು ಸುಂದರವೋ ತಲೆಕೆಡಿಸಿ ಕೊಳ್ಳುವುದೇಕೆ, ಕ್ಯಾನ್ಸರ್ ಅಂತೂ ಖಂಡಿತಾ ಸುಂದರ ವಲ್ಲ.



# ಹೈಡ್ರಾಲಿಕ್ ಲ್ಯಾಬ್‌ನಿಂದ ಝೇಲಂ ಕಡೆಗೆ

–ಸ. ಉಷಾ

'ನಮ್ಮ ಕನಸುಗಳಲ್ಲಿ ನೀವಿದ್ದಿರಿ' ಸಂಕಲನದ ಮೂಲಕ ಸಾಹಿತ್ಯಾಸಕ್ತರ ಗಮನ ಸೆಳೆದ ನೇಮಿಚಂದ್ರ ಪ್ರಾಮಾಣಿಕ ತಾತ್ವಿಕ ಬದ್ಧತೆಯ ಕತೆಗಾರ್ತಿ.

ಇವರ ಎರಡನೆಯ ಕಥಾ ಸಂಕಲನ 'ಮತ್ತೆ ಬರೆದ ಕಥೆಗಳು'ನಲ್ಲಿ ಆರು ಕತೆಗಳಿವೆ ಸ್ತ್ರೀವಾದಿ ನೆಲೆಯಲ್ಲಿ ಬರೆಯುವ ನೇಮಿಚಂದ್ರರ ಕಥೆಗಳಲ್ಲಷ್ಟೇ ಅಲ್ಲದೆ ಇತರ ಬರಹಗಳಲ್ಲೂ ಸ್ತ್ರೀವಾದದ ಬೇರೆ ಬೇರೆ ಆಯಾಮಗಳು ತೆರೆದುಕೊಂಡಿವೆ.

---

'ಮತ್ತೆ ಬರೆದ ಕಥೆಗಳು' (ಕಥಾಸಂಕಲನ)
ಲೇಖಕಿ : ನೇಮಿಚಂದ್ರ – ಶ್ರೀಪ್ರಕಾಶನ,
401, ವಿಜಯನಗರ ಎರಡನೇ ಹಂತ, ಬೆಂಗಳೂರು–40
ಪುಟಗಳು–140 ಬೆಲೆ : ರೂ. 30, 1992

---

ನೇಮಿಚಂದ್ರರ ಕತೆಗಳು ಸಾಂಪ್ರದಾಯಿಕ ಕೌಟುಂಬಿಕ ಬದುಕಿಗೆ ಅದು ಎತ್ತಿ ಹಿಡಿಯುವ ಮೌಲ್ಯಗಳಿಗೆ ಪಾತಾಳ ಗರಡಿ ಹಾಕಿ ನೋಡುತ್ತವೆ. ಬದಲಾದ ಜೀವನದ ಹಿನ್ನೆಲೆಯಲ್ಲಿ ಬದಲಾಗದ ಮೌಲ್ಯಗಳನ್ನು ಹಿಂಜಿನೋಡಿ ಹೊಸ ಮೌಲ್ಯಗಳನ್ನು ನಿರ್ಮಿಸಿಕೊಳ್ಳುವ ಬದುಕನ್ನು ಚಿತ್ರಿಸುತ್ತವೆ. ಸ್ತ್ರೀ ಪುರುಷ ಸಂಬಂಧಗಳನ್ನು ಆಧುನಿಕ ಬದುಕಿನ ಹಿನ್ನೆಲೆಯಲ್ಲಿ ಒರೆಗೆ ಹಚ್ಚುತ್ತವೆ.

ಇವರ ಕತೆಗಳಲ್ಲಿ ಬರುವ ಸ್ತ್ರೀ ಪುರುಷರು ಸ್ವಯಂದೀಪ ಕತೆಯ ರವಿಯರು, ಪ್ರತಿಫಲಿಸುವ ಶಶಿಯರು, ಒಬ್ಬರನ್ನೊಬ್ಬರು ಮುಖಾಮುಖಿಯಾಗಲಾರದವರು. ಇಲ್ಲಿ ಸಹಜವಾಗಿ ಅರಳ ಬೇಕಿದ್ದ ಸ್ತ್ರೀ ಪುರುಷ ಸಂಬಂಧಗಳು ಅರ್ಥಮೂಲವಾದ ಸಮಾಜದ ಅಪೇಕ್ಷೆಗಳಿಂದ, ಸಂಪ್ರದಾಯದ ಬಿಗಿ ಬಂಧನಗಳಿಂದ, ಅರ್ಥಕಳೆದುಕೊಂಡ ಕೌಟುಂಬಿಕ ಶ್ರದ್ಧೆಗಳಿಂದ ಮುರುಟುತ್ತವೆ.

'ತಂದೆ'ಯ ಸಾವಿನಿಂದ ಎಂ. ಎಸ್ಸಿಗೆ ಸೀಟು ಸಿಕ್ಕರೂ ಓದಲಾರದೆ ಉಳಿದ 'ಸಾವಿನತ್ತ ಬಂದು ಹೆಜ್ಜೆ'ಯ ಸುಧಾ ತನ್ನ ಉದ್ಯೋಗ ಇತ್ಯಾದಿ ಕಾರಣಗಳಿಂದ ಪ್ರೀತಿಸಿದ ಮಾವನ ಮಗಳನ್ನು ಮದುವೆಯಾಗಲಾರದೆ ಸಾವನ್ನು ಮೋಹಿಸುತ್ತ ಸುಧಾಳ ಸಾವು ತಂದಿತ್ತ ಅನುಭವಗಳಿಂದ ಬದಲಾಗಿ ಬದುಕನ್ನು ಮತ್ತೆ ಒಲಿಯುವ ರವಿ, ತಾನು ತನ್ನ ಭಾವೀ ಪತಿಯೆಂದುಕೊಂಡ ಮಾವನ ಮಗನಿಗಿಂತ ಬೆಳವಣಿಗೆಯ ದಾರಿಯಲ್ಲಿ ಬಹು ದೂರ ನಡೆದೆನೆಂದು ಅರಿವಾದಾಗ ಅವನನ್ನು ತ್ಯಜಿಸುವ 'ಏನೊಂದೂ ಆಗದವರು' ಕತೆಯ ಶಶಿ, ತನ್ನ ಅಪೂರ್ಣತೆಗಳಿಂದ ಕುಟುಂಬದ ಒತ್ತಡಗಳಿಂದ ತನ್ನನ್ನು ಒಲಿದ ಸಹಚರಿಯನ್ನು ಅಗಲಬೇಕಾದ 'ನೀವು ಕಾಣದ ನಾಳೆಗಳಲ್ಲಿ' ಕತೆಯ ನಾಯಕ ರವಿ ಇವರೆಲ್ಲ ಈ ವಿಷಯ ಸಮಾಜಕ್ಕೆ ಹೊಂದಿಕೊಳ್ಳಲೂ ಆರದೆ, ಅದನ್ನು ಬದಲಾಯಿಸಲೂ ಆರದೆ ವಿಲಿವಿಲಿ ಒದ್ದಾಡುವ ಟಿಪಿಕಲ್ ಮಾದರಿಗಳು, ಸಹಜತೆಗೋಸ್ಕರ ಉಸಿರು ಕಟ್ಟಿದಂತೆ ಚಡಪಡಿಸುವವರು.

ಈ ಸ್ಥಿತಿಗೆ ಬದಲಾದ ಬದುಕಿನ ಮೌಲ್ಯಗಳು ಕೊಡುತ್ತಾ ಹೋಗುವ ಉತ್ತರ ಸಹ ಈ ಕತೆಗಳ ಮೂಲಕವೇ ಚಿತ್ರಿತವಾಗಿದೆ.

'ಹೊಸಹುಟ್ಟು' ಕತೆಯಲ್ಲಿ 'ಹುಚ್ಚುಹುಡುಗಿ ನಮ್ಮದಾನ ಸೂರ್ಯವಂಶ ಚಂದ್ರವಂಶ........ ಮಗು ಬೇಕೆನಿಸಿದರೆ ದತ್ತು ತೆಗೆದುಕೊಳ್ಳೋಣ ತಾಯ್ತನ ಹೆರುವ ಹೇರುವ ಕ್ರಿಯೆಯಲ್ಲಿ ಅಡಗಿಲ್ಲ' ಎಂದು ನಾಯಕಿಗೆ ಒತ್ತಾಸೆಯಾಗುವ ಮುಕ್ತ ಚಿಂತನೆಯ ಗಂಡ, ಸೃಷ್ಟಿ ಕ್ರಿಯೆಯ ವೇದನೆಗಳು ಪ್ರಸವ ತಾಯ್ತನದ ವೇದನೆ–ಆನಂದಗಳಿಗಿಂತ ಕಡಿಮೆಯದೇನಲ್ಲ, ಸಂತಾನವು ಜೀವನದ ಪರಮ ಸಾರ್ಥಕ್ಯವಲ್ಲ ಎಂಬುದನ್ನು ಕಂಡುಕೊಳ್ಳುವ ಕಲಾವಿದೆ ಹೆಂಡತಿ.

ತಾನೇ ಕಟ್ಟಿಕೊಂಡ ಸುರಕ್ಷಿತತೆಯ ಅವಲಂಬಿ ತನದ ಕೋಟೆಯಿಂದ ಹೊರಬಂದು ಸ್ವಾಭಿಮಾನದ ಬದುಕನ್ನು ಬಾಳಲೇಬೇಕಾಗಿ ಬಂದಾಗ ಸ್ವಾಭಿಮಾನದ ಅರಿಸಿ ಕೊಳ್ಳುವ "ಕಪ್ಪು ಮೋಡ ಬೆಳ್ಳಿ ಅಂಚಿನ ನಾಯಕಿ" ಇವರೆಲ್ಲ ತಮ್ಮ ಮಿತಿಗಳಲ್ಲೇ ಈ ಸೀಮಿತದ ಬದುಕು ಒಡ್ಡುವ ಸವಾಲುಗಳಿಗೆ ಉತ್ತರವನ್ನು ಹುಡುಕುವವರು.

ಬದುಕನ್ನು ಸ್ವಾನುಭವದ ನಿಕಷಕ್ಕೆ ಒಡ್ಡಿದಾಗ ಹೊಸ ತತ್ವಗಳು ಹುಟ್ಟುತ್ತವೆ. 'ಇದು ಕಥೆಯಲ್ಲ. ಸಿನಿಮಾ ಅಲ್ಲ. ಮೂರನೆಯ ಹೆಣ್ಣು ಖಳನಾಯಕಿಯಲ್ಲ ಪತ್ನಿಯ ಪಾತಿವ್ರತ್ಯದ ಅಖಂಡ ಜಯವಾಗಬೇಕಿಲ್ಲ....' ಎಂಬ ಗೆಳತಿಯ ಮಾತು. 'ಬಿಡು ಅವನನ್ನು ಅವನ ಬದುಕಿಗೆ, ಅದರೊಡನೆಯ ಪಾಪ ಪುಣ್ಯಗಳಲ್ಲಿ ತಕ್ಕಡಿಗೆ, ಒಪ್ಪು ತಪ್ಪುಗಳ ಇತ್ಯರ್ಥಕ್ಕೆ, ಪ್ರೀತಿ ಪ್ರೇಮಗಳ ಹೆಣಗಾಟಕ್ಕೆ' ಎಂಬ ನಾಯಕಿಯ ಚಿಂತನ ಇದಕ್ಕೊಂದು ಸಾಕ್ಷಿ.

ಈ ಸಂಕಲನದ ಎಲ್ಲ ಕತೆಗಳಿಗೆ ಕಳಸವಿಟ್ಟಂತಿರುವುದು 'ಮತ್ತೆ ಬರೆದ ಕವಿತೆ' ಸ್ತ್ರೀ ಪುರುಷ ಸಂಬಂಧಗಳಲ್ಲಿರುವ ವಿಷಮತೆ, ಕೃತಕ ದಮನ ನೀತಿಗಳಿಂದ ಸ್ತ್ರೀ ಯಾವ ರೀತಿ ಯಲ್ಲಿ ನರಳುವಳೊ ಅದೇ ರೀತಿಯಲ್ಲಿ ಪುರುಷನ ಬದುಕೂ ಸಹ ವಿಷಮತೆಗೆ ಗುರಿಯಾಗಿದೆ. ಇದರಿಂದ ಮುಕ್ತಿ ಪಡೆವ ದಾರಿ ಸಹಜತೆಯಲ್ಲಿದೆ ಎಂಬ ಕಾಣ್ಕೆ ಈ ಕಥೆ ಯಲ್ಲಿ ದರ್ಶನವಾಗಿ ಅರಳಿದೆ. ವಿದ್ಯಾಭ್ಯಾಸ, ಸಂಶೋ– ಧನೆ, ಉದ್ಯೋಗ, ಆರ್ಥಿಕ ಸ್ವಾತಂತ್ರ್ಯ, ಪ್ರವಾಸ, ಹೊರ ಜಗತ್ತಿಗೆ ತೆರೆದುಕೊಳ್ಳುವಿಕೆ ಇದೆಲ್ಲ ಇದ್ದರೂ ತನ್ನ ಬಾಲ್ಯದ ನೆನಪುಗಳಿಂದ ಹೊರಬರಲಾರದ ಡಾ॥ ಅನು ಈ ಕತೆಯ ನಾಯಕಿ, ಪ್ರಯೋಗಾಲಯದಲ್ಲಿ ನೀರನ್ನು ಕಟ್ಟಿ ಬಂಧಿಸಿ ಲೆಕ್ಕ ಹಾಕಿಬಿಡುವಳು. ಒಂದು ವಿಚಾರಗೋಷ್ಠಿಯಲ್ಲಿ ಪ್ರಬಂಧ ಮಂಡಿಸಲು ಬಂದಾಗ 'ಆಳದ ಕಣಿವೆ ಹಾದಿಯ ನಡುವೆ ಜುಳು ಜುಳನೆ ಹರಿದು ಹಾಯ್ದು ನೂರಾರು ಸಣ್ಣ ಝರಿಗಳು, ಬಿಸಿಲಿನ ಪ್ರಥಮ ಸ್ಪರ್ಶಕ್ಕೆ ಮೈ ಅರಳಿ ನಿಂತ ಬಣ್ಣ ಬಣ್ಣದ ಹೂಗಳು........ ರಾತ್ರಿಯ ಕತ್ತಲಲ್ಲಿ ದುಃಸ್ವಪ್ನವಾಗಿ ಕಾಡಿದ ಅಪರಿಚಿತ ನಗರಿ ಮುಂಜಾನೆಯ ಹೊಂಗಿರಣದಲ್ಲಿ ಫಳಫಳ' ಹೊಳೆಯುವುದನ್ನು ಅನುಭವಿಸಿ ಬಾಲ್ಯದಲ್ಲಿ ಅಪ್ಪ ಹೇರಿದ ಗಂಭೀರತೆಯು ಶಿಲುಬೆಯೆಂದು ಬಂಧನ ವೆಂದು ಅರಿಯುತ್ತಾಳೆ, 'ಡಿಂಪಲ್ಲನ್ನೋ ಜೂಲಿಯನ್ನೋ ಪ್ರೀತಿಸುವ ಬದಲು ಪಂಡರೀಬಾಯನ್ನೇ ಗಟ್ಟಿಯಾಗಿ ಲವ್ ಮಾಡಿಬಿಟ್ಟೆ' ಎಂದು ತನ್ನನ್ನು ತಾನೇ ಗೇಲಿ ಮಾಡಿಕೊಂಡು ಗಹಗಹಿಸುವ ಗೆಳೆಯನ ಸಾಹಚರ್ಯದಲ್ಲಿ "ಜಗತ್ತಿನ ಅರ್ಧ ಜನರಿಂದ ನಾ ದೂರವಿದ್ದೆ, ಅವರು ಗಂಡಸರು ಎಂಬ ಕಾರಣಕ್ಕಾಗಿ ಗಂಡು ಹೆಣ್ಣಿನ ಸಂಬಂಧದ ನೂರಾರು ಸಾಧ್ಯತೆಗಳಲ್ಲಿ ಅಪ್ಪ ನನಗೆ ಮನವರಿಕೆ ಮಾಡಿದ್ದು ಒಂದನ್ನೇ" ಎಂಬುದನ್ನು ಅರಿಯುತ್ತಾಳೆ. ಕಣಿವೆಯಲ್ಲಿನ ಅಕೃತಕ ಪ್ರೀತಿಯನ್ನು, ಬೆನ್ನು ಬಾಗಿಸದೇ ನಿಂತ ಪೈನ್ ವೃಕ್ಷಗಳ ನಿಲುವನ್ನು, ಕಣಿವೆಯ ಸಾಧ್ಯತೆ ಗಳನ್ನು ಬೆಂಗಳೂರಿಗೂ ಕೊಂಡೊಯ್ಯುವ ಆಸೆ ಹೊತ್ತು ಮರಳುತ್ತಾಳೆ.

ಈ ಕಥೆ ನೇಮಿಯವರ ಕತೆಗಾರಿಕೆಯ ಒಂದು ಮಹತ್ವದ ತಿರುವು. ಇಲ್ಲಿಯವರೆಗೆ ಸ್ವಯಂದೀಪಕತೆಯ ರವಿಯರ, ಪ್ರತಿಫಲಿಸುವ ಶಶಿಯರ ಹೋರಾಟದ ಕತೆ ಬರೆದಿರುವ, ಮುಗಿಲು ಮುಟ್ಟಿದ ದಿಟ್ಟೆಯರ ಬಗ್ಗೆ ಬರೆಯಬಲ್ಲ ನೇಮಿಚಂದ್ರ ಇನ್ನು ಮುಂದೆ ವಿವೇಕ, ವಿಶ್ವಾಸ, ಪ್ರೇಮಾ, ಭಾನುಮತಿಯರ ಕತೆಗಳ ಅನಂತ ಸಾಧ್ಯತೆಗಳನ್ನು ಅವಲೋಕಿಸಬೇಕಿದೆ. ಮತ್ತೆ ಬರೆದ ಕವಿತೆ ಈ ದಿಕ್ಕಿನತ್ತ ಲೇಖಕಿ ಇಟ್ಟಿರುವ ಮಹತ್ವದ ಹೆಜ್ಜೆ. ●

---

□ ಜ್ಞಾನಪೀಠ ಪುರಸ್ಕಾರ ಪಡೆದ ಮೊಟ್ಟ ಮೊದಲ ಮಹಿಳೆ ಬೆಂಗಾಲಿ ಲೇಖಕಿ ಆಶಾಪೂರ್ಣ ದೇವಿ. ಈಕೆ 1964ರಲ್ಲಿ ರಚಿಸಿದ 'ಪ್ರಥಮ ಪ್ರತಿಶ್ರುತಿ' ಎಂಬ ಕಾದಂಬರಿಗೆ, 1976ರಲ್ಲಿ ಜ್ಞಾನಪೀಠ ಪುರಸ್ಕಾರ ದೊರೆಯಿತು. 1909ರಲ್ಲಿ ಜನಿಸಿದ ಈಕೆ ಸುಮಾರು 180 ಕೃತಿಗಳನ್ನು ರಚಿಸಿದ್ದಾರೆ.

□ ಭಾರತದಲ್ಲಿ ನ್ಯಾಯಶಾಸ್ತ್ರದಲ್ಲಿ ಪದವೀಧರಳಾದ ಮೊಟ್ಟ ಮೊದಲ ಮಹಿಳೆ ಕಾರ್ನಾಲಿಯ ಸೊರಬ್ಜಿ ಎಂಬಾಕೆ, 1894ರಲ್ಲಿ ಪದವೀಧರಳಾದ ಈಕೆಗೆ, 1923 ರವರೆಗೂ ವಕಾಲತ್ತು ನಡೆಸಲು ಅನುಮತಿ ಇರಲಿಲ್ಲ. 1916ರಲ್ಲಿ ಎರಡನೇ ಮಹಿಳೆ ಪದವೀಧರಳಾದಳು.

ವರದಿ

# ಅಂಗಳದಿಂದ ಬೀದಿಗಿಳಿದ ಮಹಿಳೆಯರು

ಬೀದರ್‌ನಿಂದ ಮಂಗಳೂರಿನವರೆಗೆ ರಾಜ್ಯದ ಮೂಲೆ ಮೂಲೆಗಳಿಂದ ಮಹಿಳೆಯರು ಕೇಂದ್ರ ಸರ್ಕಾರದ ಖಾಸಗೀಕರಣದ ನೀತಿಯ ವಿರುದ್ಧ ದೀರ್ಘ ಹೋರಾಟ ನಡೆಸುವುದನ್ನು ಘೋಷಿಸಲು ದೂರದ ಮೈಸೂರಿಗೆ ಬಂದಿದ್ದರು. ಸಂಘಟನಕಾರರು ಮಳೆಯಿಂದ ಮೆರವಣಿಗೆ ಬೇಡವೆಂದು ಘೋಷಿಸಿದರೂ ಪ್ರತಿನಿಧಿಗಳ ಹಟದಿಂದ ಮೆರವಣಿಗೆ ನಡೆದುಬಿಟ್ಟಿತು. ಹಾಗೂ ಮಳೆಯಲ್ಲೇ ಎರಡು ಗಂಟೆಗಳ ಭಾರಿ ಬಹಿರಂಗ ಸಭೆ ನಡೆಯಿತು.

---

"ಸುರಿಯುತ್ತಿದ್ದ ಮಳೆ, ಚಳಿಯ ವಾತಾವರಣ, ರಸ್ತೆಯಲ್ಲಿ ಹರಿಯುತ್ತಿದ್ದ ನೀರು, ಇದ್ಯಾವುದನ್ನೂ ಲೆಕ್ಕಿಸದೆ ಬೀದಿಗಿಳಿದ ಮಹಿಳೆಯರ ಭಾರಿ ಪ್ರವಾಹ"— ಕರ್ನಾಟಕ ರಾಜ್ಯ ಅಂಗನವಾಡಿ ಕಾರ್ಯಕರ್ತೆಯರು, ಸಹಾಯಕಿಯರು ಭಾಗವಹಿಸಿದ್ದ 3ನೇ ರಾಜ್ಯ ಸಮ್ಮೇಳನವು ಆಗಸ್ಟ್ 22ರಂದು ಅರಮನೆ ನಗರವಾದ ಮೈಸೂರಿನಲ್ಲಿ ಉದ್ಘಾಟನೆಗೊಂಡಾಗ ಕಂಡುಬಂದ ದೃಶ್ಯವಿದು.

---

ಹಿರಿಯ ಕಾರ್ಮಿಕ ನಾಯಕ ಎಐಟಿಯುಸಿಯ ಅಖಿಲ ಭಾರತ ಅಧ್ಯಕ್ಷರಾದ ಎಂ. ಎಸ್. ಕೃಷ್ಣನ್ ಸಮ್ಮೇಳನವನ್ನು ಉದ್ಘಾಟಿಸಿ ಮಾತನಾಡಿ ಇದೊಂದು ಐತಿಹಾಸಿಕ ಘಟನೆಯೆಂದು ಬಣ್ಣಿಸಿ, ಎಐಟಿಯುಸಿಯ ಪೂರ್ಣ ಬೆಂಬಲ ಘೋಷಿಸಿ, ದುಡಿಯುವ ಜನರು ದೇಶದ ಸ್ವಾತಂತ್ರ್ಯ, ಸ್ವಾವಲಂಬನೆಗೆ ಮುಂದಾಗಬೇಕೆಂದು ಕರೆಯಿತ್ತರು.

ಗುಲ್ಬರ್ಗಾ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕಿ ಹಾಗೂ ಕರ್ನಾಟಕ ರಾಜ್ಯ ಮಹಿಳಾ ಸಂಘ (ಎನ್.ಎಫ್. ಡಬ್ಲ್ಯು.)ದ ಅಧ್ಯಕ್ಷೆ ಶ್ರೀಮತಿ ಮಲ್ಲಿಕಾ ಘಂಟಿಯವರು ಮಾತನಾಡಿ ಮಹಿಳಾ ಅಂಗನವಾಡಿ ಸಂಘಟನೆಗಳು ಕೇವಲ ಆರ್ಥಿಕ ಬೇಡಿಕೆಗಳಿಗಾಗಿ ಹೋರಾಟ ನಡೆಸುವುದರ ಜೊತೆಗೆ ಮಹಿಳೆಯರ ಸಾಮಾಜಿಕ ಸ್ಥಾನಮಾನ ಹಾಗೂ ಸಮಾನತೆಗಾಗಿ ಹೋರಾಟ ನಡೆಸುವುದು ಅನಿವಾರ್ಯವೆಂದು ತಿಳಿಸಿದರು.

ಶಿವಮೊಗ್ಗ ಜಿಲ್ಲೆಯ ಸಾಕ್ಷರತಾ ಚಳುವಳಿಯ ಕಾರ್ಯದರ್ಶಿ ಡಾ॥ ರಾಜನಾಯ್ಕರವರು, ಕೊಳೆತು ನಾರುತ್ತಿರುವ ಸಾಮಾಜಿಕ ವ್ಯವಸ್ಥೆಯ ಬದಲಾವಣೆ ಮಹಿಳಾ ಹೋರಾಟದಿಂದ ಮಾತ್ರವೇ ಸಾಧ್ಯವೆಂದು ಹೇಳಿದರು. ಸಭೆಯ ಅಧ್ಯಕ್ಷತೆಯನ್ನು ಎಚ್.ಎಂ.ಎಸ್. ಮುಖಂಡ ಹಾಗೂ ಮಾಜಿ ಶಾಸಕ ವೇದಾಂತ ಹೆಮ್ಮಿಗೆ ಅವರು ವಹಿಸಿದ್ದರು.

ಒಪ್ಪಂದಗಳ ಜಾರಿಗಾಗಿ ಒತ್ತಾಯಿಸಿ ನಿರ್ಣಯ ಮಂಡಿಸಿ ಮಾತನಾಡಿದ ಫೆಡರೇಷನ್ ಪ್ರಧಾನ ಕಾರ್ಯದರ್ಶಿ ಎಸ್. ಎಲ್. ರಾಧಾ ಸುಂದರೇಶ್ ಕಾನೂನು— ಒಪ್ಪಂದಗಳನ್ನು ಜಾರಿಗೆ ತರುವ ಮೂಲಕ 'ಮಾದರಿ ಮಾಲಿಕ'ನಾಗಬೇಕಾದ ಸರ್ಕಾರ ಕಾನೂನು ಉಲ್ಲಂಘಿಸಿ ಶೋಷಣೆ ಮಾಡುವ ಮೂಲಕ 'ಕಾನೂನು ಮುರಿಯುವ ಮಾದರಿ ಮಾಲಿಕ'ನಾಗಿದೆಯೆಂದು ವಿವರಿಸಿ ಈ ಬಗ್ಗೆ ಕ್ರಮ ಕೈಗೊಳ್ಳದಿದ್ದರೆ ವಿಧಾನಸಭೆಯ ಚಳಿಗಾಲದ ಅಧಿವೇಶನ ನಡೆಯದಂತೆ ಮಾಡಲಾಗುವುದೆಂದು ಎಚ್ಚರಿಸಿದರು.

ಸಾವಿರಾರು ಸಂಖ್ಯೆಯಲ್ಲಿ ಬಂದಿದ್ದ ಮಹಿಳೆಯರ ಮೆರವಣಿಗೆಯಿಂದ ನಗರದ ಪ್ರಮುಖ ವೃತ್ತಗಳಲ್ಲಿ ಅರ್ಧ ಗಂಟೆಗಳಕಾಲ ಸಂಚಾರ ಅಸ್ತವ್ಯಸ್ತವಾಗಿತ್ತು. ರಾಜ್ಯದ ವಿವಿಧ ಜಿಲ್ಲೆಗಳಿಂದ ಆಯ್ದ ಪ್ರತಿನಿಧಿಗಳು ದಿನಾಂಕ ಆಗಸ್ಟ್ 23ರಂದು 10 ಗಂಟೆಗಳಿಗೂ ಹೆಚ್ಚು ಕಾಲ ಸಂಘಟನೆಯ ವಿವಿಧ ವಿಚಾರಗಳ ಬಗ್ಗೆ ದೀರ್ಘಚರ್ಚೆ ನಡೆಸಿ ಬಲಪಡಿಸುವ ಹಾಗೂ ಹೋರಾಟಗಳನ್ನು ತೀವ್ರಗೊಳಿಸುವ ನಿರ್ಧಾರ ಕೈಗೊಂಡರು.

ಮೈಸೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕಿ ಶ್ರೀಮತಿ ವಿಜಯಾದಬ್ಬೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪನಿರ್ದೇಶಕ ಕೃಷ್ಣರಾವ್, ಕಾಂ. ಎಂ.ಸಿ. ವೆಂಕಟರಾಮು, ಕಾಂ. ಅನಂತ ಸುಬ್ಬರಾವ್ ಅವರುಗಳು ಅಂಗನವಾಡಿ ನೌಕರರ ಸಮಸ್ಯೆಗಳ ಬೇಡಿಕೆಗಳ ಬಗ್ಗೆಯೂ, ರಾಷ್ಟ್ರೀಯ ಸಮಸ್ಯೆಗಳ ಬಗ್ಗೆಯೂ ಚರ್ಚಿಸಿದರು.

**—ರಾಧಾ**

# ಧರ್ಮಾಂಧತೆ ಮತ್ತು ಮಹಿಳೆ

ಕಳೆದ ಹಲವು ವರ್ಷಗಳಿಂದ ದೇಶದಲ್ಲಿ ಹಬ್ಬುತ್ತಿರುವ ಕೋಮುವಾದ, ಹಿಂಸೆ, ದ್ವೇಷದ ವಾತಾವರಣ—ಈ ಪರಿಸ್ಥಿತಿಯಲ್ಲಿ ಮಹಿಳೆಯರ ಮೇಲೆ ಅದರ ಪರಿಣಾಮ ಹಾಗೂ ಮಹಿಳೆಯರ ಜವಾಬ್ದಾರಿಗಳು – ಇವುಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನವಾಗಿ ಜನವಾದಿ ಮಹಿಳಾ ಸಂಘಟನೆಯು ಬೆಂಗಳೂರು ಜಿಲ್ಲಾ ಘಟಕವು ವಿಚಾರ ಸಂಕಿರಣವೊಂದನ್ನು ಏರ್ಪಡಿಸಿತ್ತು.

---

ಧರ್ಮಾಂಧತೆ ಮತ್ತು ಮಹಿಳೆ ವಿಚಾರ ಸಂಕಿರಣವನ್ನು ಉದ್ಘಾಟಿಸಿದ ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆಯ ಉಪಾಧ್ಯಕ್ಷೆ ಹಾಗೂ ಹಿರಿಯ ಮಹಿಳಾ ನಾಯಕಿ ಶ್ರೀಮತಿ ಕನಕ ಮುಖರ್ಜಿಯವರು 'ಧರ್ಮಾಂಧತೆ ಮತ್ತು ಮಹಿಳಾ ಚಳುವಳಿಯ ಸವಾಲುಗಳು' ವಿಷಯವನ್ನು ಕುರಿತು ಮಾತನಾಡುತ್ತಾ, 'ಕೇವಲ ಅರ್ಧ ಶತಮಾನಗಳ ಹಿಂದೆ ಕೂಡಾ ಮಹಿಳೆಯರು ಪ್ರಜಾಸತ್ತಾತ್ಮಕ ಪ್ರಕ್ರಿಯೆಗಳಿಂದ ಚುನಾವಣೆಗಳಲ್ಲಿ ಭಾಗವಹಿಸುವ ಸಾಧ್ಯತೆಗಳಿರಲಿಲ್ಲ. ಆದರೆ ಇಂದಿಗೂ ಪರಿಸ್ಥಿತಿ ಹೆಚ್ಚು ಬದಲಾಯಿಸಿಲ್ಲ. ಇಂದಿನ ಸಮಾಜವನ್ನು ಹಿಂದಿನ ಮೂಲಭೂತವಾದೀ ಯುಗಕ್ಕೆ ಕೊಂಡೊಯ್ಯುವ ಪ್ರಯತ್ನಗಳು ನಡೆಯುತ್ತಿವೆ. ಜನತೆಯನ್ನು ಜಾತಿ, ಧರ್ಮ, ಭಾಷೆಗಳ ಹೆಸರಿನಲ್ಲಿ ಒಡೆಯುವ ಪ್ರಯತ್ನ ಪಾತಿವ್ರತ್ಯ ಪರೀಕ್ಷೆಗೆ ಅಗ್ನಿ ಪ್ರವೇಶ ಮಾಡಿಸಿದ ಸೀತೆಯ ಕಾಲಕ್ಕೆ ನಮ್ಮ ಮಹಿಳೆಯರನ್ನು ಕರೆದೊಯ್ಯುವುದು ಸರಿಯೇ ? ಎಂದು ಪ್ರಶ್ನಿಸಿ, ಧರ್ಮಾಂಧತೆ ಮತ್ತು ಮೂಲಭೂತವಾದಿತನದ ವಿರುದ್ಧ ಎಲ್ಲ ಕಟ್ಟುಪಾಡುಗಳನ್ನು ಮುರಿದು ಬಂದು ಹೋರಾಡಬೇಕೆಂದು ಕರೆಯಿತ್ತರು.

ಕೋಮು ಸೌಹಾರ್ದತಾ ವೇದಿಕೆಯ ಸಂಚಾಲಕಿ ಡಾ|| ವಿಜಯಾ ಮಾತನಾಡುತ್ತಾ, 'ಸಾಮ್ರಾಜ್ಯಶಾಹಿಗಳು ಹಾಕಿಕೊಟ್ಟಿರುವ ರಾಜ್ಯಾಂಗ ನಮ್ಮಲ್ಲಿದೆ. ಈ ದೇಶದಲ್ಲಿ ಧರ್ಮ ಮತ್ತು ರಾಜಕೀಯವನ್ನು ಬೇರ್ಪಡಿಸುವುದು ಅಷ್ಟು ಸುಲಭವಲ್ಲ. ದೇಶದಲ್ಲಿ ಎರಡು ರೀತಿಯ ಭಾವನೆಗಳಿವೆ– ಒಂದು ಭಾರತೀಯ ನಾರಿಯ ಭಾವನೆ ಮತ್ತೊಂದು ಹಿಂದೂ ನಾರಿಯ ಭಾವನೆ. ಇದರಲ್ಲಿ ಮಾದರಿ ಯಾವುದಾಗಬೇಕೆಂದು ನೋಡಿದಾಗ ಕಾಳಿಯೋ ಸೀತೆಯೊ? ಎಂಬ ಸಮಸ್ಯೆ ಎದುರಾಗುತ್ತದೆ. ಕಾಳಿ ಹಿಂಸೆಯ ಪ್ರತೀಕವಾದ್ದರಿಂದ ಸೀತೆಯೇ ಮಾದರಿಯಾಗಿ ಉಳಿಯುತ್ತಾಳೆ.

ಕಳೆದ ಕೆಲವು ವರ್ಷಗಳಿಂದ ನಡೆದ ಗಲಭೆಯ ಸಂದರ್ಭಗಳಲ್ಲಿ ಮಹಿಳೆಯರು ಸುಡುವ ಕಾರ್ಯಕ್ಕೂ ಹೋಗಿದ್ದಾರೆ. ಮಸೀದಿಯನ್ನು ಕೆಡವಲು ಹೋದ ಕರಸೇವಕರನ್ನು ಆರತಿ ಮಾಡಿ ಕಳಿಸಿದ್ದಾರೆ, ಧರ್ಮದ ಮಬ್ಬಿನಲ್ಲಿರುವ ಅಂತಹ ಮಹಿಳೆಯರ ಮನಃಸ್ಥಿತಿಯನ್ನು ನಾವು ಅರ್ಥಮಾಡಿಕೊಳ್ಳಬೇಕು. ಇಂತಹ ಮಹಿಳೆಯರಲ್ಲಿ ವಸ್ತುಸ್ಥಿತಿಯ ಬಗ್ಗೆ ಜಾಗ್ರತಿಯನ್ನು ಮೂಡಿಸುವ ಕೆಲಸವನ್ನು ಮಹಿಳಾ ಸಂಘಟನೆಗಳು ಮಾಡಬೇಕು' ಎಂದರು.

ಶ್ರೀಮತಿ ಅಲಿಯಾ ಕಾಸಿಂ ಮಾತನಾಡುತ್ತಾ ಮುಸ್ಲಿಂ ಮಹಿಳೆಗೆ ಪ್ರತ್ಯೇಕ ಸಮಸ್ಯೆಗಳಿಲ್ಲ. ಮುಸ್ಲಿಂ ಮಹಿಳೆಯರನ್ನು ಸಂದರ್ಭಕ್ಕೆ ತಕ್ಕಂತೆ ಬಳಸಿಕೊಳ್ಳಲಾಗುತ್ತದೆ. ಅಧಿಕಾರದ ಚುಕ್ಕಾಣಿ ಹಿಡಿದವರೆಲ್ಲರೂ ಅವರನ್ನು ತುಳಿದಿದ್ದಾರೆ. ಮೂಲಭೂತವಾದ, ಕೋಮುವಾದಗಳನ್ನು ಹಿಮ್ಮೆಟ್ಟಿಸಲು ಒಗ್ಗಟ್ಟಿನಿಂದ ಹೋರಾಟ ನಡೆಸಬೇಕು ಎಂದು ಹೇಳಿದರು.

ವಿಚಾರ ಸಂಕಿರಣದ ಅಧ್ಯಕ್ಷತೆ ವಹಿಸಿದ್ದ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಶ್ರೀಮತಿ ಕೆ. ಎಸ್. ವಿನೋದಾರವರು ಮತ ಮತ್ತು ಧರ್ಮವನ್ನು ತಪ್ಪಾಗಿ ಅರ್ಥೈಸಲಾಗುತ್ತಿದೆ ಎಂದು ಹೇಳಿದರು. ಹಸಿದವರಿಗೆ ಅನ್ನ ಕೊಡುವುದು, ನೆಲೆ ಇಲ್ಲದವನಿಗೆ ನೆಲೆ ನೀಡುವುದು ಧರ್ಮವಾಗಿರುವಾಗ ಜಾತಿ, ಭಾಷೆಯ ಹೆಸರಿನಲ್ಲಿ ಜನರನ್ನು ಒಡೆಯುವುದು ಎಂದೂ ಧರ್ಮವೆನಿಸಿಕೊಳ್ಳುವುದಿಲ್ಲ ಎಂಬ ಸಂದೇಶವನ್ನು ಜನತೆಗೆ ಮಹಿಳಾ ಸಂಘಟನೆಗಳು ನೀಡಬೇಕು ಎಂದು ಹೇಳಿದರು.

ಪ್ರಾರಂಭದಲ್ಲಿ ಜನವಾದಿ ಮಹಿಳಾ ಸಂಘಟನೆಯ ರಾಜ್ಯ ಕಾರ್ಯದರ್ಶಿ ಶ್ರೀಮತಿ ಕೆ. ಎಸ್. ವಿಮಲ ಪ್ರಸ್ತಾವನಾ ಭಾಷಣ ಮಾಡುತ್ತಾ ದೇಶವು ಇಂದು ಕವಲು ದಾರಿಯಲ್ಲಿರುವಾಗ ಮಹಿಳೆಯರು ವಹಿಸಬೇಕಾದ ಜವಾಬ್ದಾರಿಯುತ ಕರ್ತವ್ಯಗಳನ್ನು ಕುರಿತು ಮಾತನಾಡಿದರು. ಕಾರ್ಯಕ್ರಮದ ನಿರ್ವಹಣೆಯನ್ನು ಕುಮಾರಿ ಸಿಂಧೂರಾವ್ ನಡೆಸಿಕೊಟ್ಟರು.

**–ವಿಮಲ**

# ಜನನ ನಿಯಂತ್ರಣಕ್ಕೆ ಹೊಸ ಔಷಧ

–ಲತಾ

"ತೊಟ್ಟಿಲನ್ನು ತೂಗುವ ಕೈಗಳು ವಿಶ್ವವನ್ನು ಆಳುತ್ತವೆ" ಎನ್ನುವುದುಂಟು. ಆದಾಗ್ಯೂ ಮಹಿಳೆ ತಾನು ಆಳಬೇಕಾಗಿದ್ದ ವಿಶ್ವದ ಭವಿಷ್ಯ ರೂಪಿಸುವಲ್ಲಿ ಅತಿ ಕಡಿಮೆ ಅಥವಾ ಯಾವ ಪಾತ್ರವನ್ನೂ ನಿರ್ವಹಿಸಲು ಅವಕಾಶ ಇಲ್ಲದಿರುವುದು ವ್ಯಂಗ್ಯವೇ ಸರಿ.

ಮಹಿಳೆ ತನ್ನ ಕುಟುಂಬವನ್ನು ರೂಪಿಸಿಕೊಳ್ಳಲು ತನ್ನ ಫಲವತ್ತತೆಯನ್ನು (ಬಸಿರನ್ನು) ನಿಯಂತ್ರಿಸುವ ಅಧಿಕಾರವನ್ನೂ ಪಡೆದಿಲ್ಲ ಎಂಬುದು ಮೇಲಿನ ವಾಕ್ಯವನ್ನು ಸಮರ್ಥಿಸುತ್ತದೆ. ಮಹಿಳೆಗೆ ಜನನವನ್ನು ನಿಯಂತ್ರಿಸುವ ಅಧಿಕಾರ ತಿರಸ್ಕರಿಸುವ ಮೂಲಕ ವಿಶ್ವ ಇಂದು ಎದುರಿಸುತ್ತಿರುವ ಜನಸಂಖ್ಯೆ ಸಮಸ್ಯೆಗೆ ನೇರ ಪರಿಹಾರ ಕಂಡುಕೊಳ್ಳ ಬಹುದಾಗಿದ್ದ ಸಾಧ್ಯತೆಯನ್ನು ಕಡೆಗಣಿಸಲಾಗಿದೆ.

ಮಹಿಳೆಗೆ ಆಯ್ಕೆ ಇದ್ದಲ್ಲಿಯೂ ಬೇಡವಾದ ಬಸಿರನ್ನು ಕೊನೆಗಾಣಿಸಲು ಲಭ್ಯವಿರುವ ಎಲ್ಲಾ ವೈದ್ಯಕೀಯ ಕ್ರಮಗಳು ಅತೀ ತ್ರಾಸದಾಯಕವಾಗಿವೆ ಮತ್ತು ಮಾನಸಿಕ ಹಿಂಸೆಯನ್ನು ನೀಡುತ್ತವೆ.

ವಿಶ್ವ ಆರೋಗ್ಯದ ಸಂಸ್ಥೆಯ ಇತ್ತೀಚಿನ ಅಂದಾಜಿನ ಪ್ರಕಾರ ಪ್ರತಿ ವರ್ಷ ನಡೆಯುವ 50 ದಶಲಕ್ಷ ಗರ್ಭಪಾತ (ಇದರಲ್ಲಿ ಶೇ. 50ರಷ್ಟು ಅಕ್ರಮವಾಗಿರುತ್ತವೆ)ಗಳಲ್ಲಿ ಶೇ. 3ರಷ್ಟು ಪ್ರಕರಣಗಳು ಸಾವಿನಲ್ಲಿ ಕೊನೆಗೊಳ್ಳುತ್ತವೆ ಅಥವಾ ಈ ಸಂದರ್ಭದಲ್ಲಿ ಉಂಟಾದ ಗಾಯಗಳು ಬಂಜೆತನಕ್ಕೆ ದಾರಿ ಮಾಡಿಕೊಡುತ್ತವೆ.

ಫ್ರಾನ್ಸ್‌ನಲ್ಲಿ ಇತ್ತೀಚಿಗೆ ನಡೆಸಿದ ಸಂಶೋಧನೆ ನಂತರ ಕೊನೆಗೂ ಈ ಸಮಸ್ಯೆಗೆ ಮೈಫೆಪ್ರೈಸ್ಟೋನ್ ಮಾತ್ರೆ ಮೂಲಕ ಪರಿಹಾರ ಕಂಡುಕೊಳ್ಳಲಾಗಿದೆ. 'RU-486' ಎಂದು ಜನಪ್ರಿಯವಾಗಿರುವ ಪ್ರಾಜೆಸ್ಟಿರಾನ್ ನಿರೋಧದ ಈ ಮಾತ್ರೆಯಿಂದ ಬಸಿರನ್ನು ನಿಯಂತ್ರಿಸಲು ಸಾಧ್ಯವಾಗಿದೆ.

RU–486 ಪ್ರಾಜೆಸ್ಟಿರಾನ್ ಹಾರ್ಮೋನಿಗೆ ವೈರಿಯಾಗಿದೆ. ಭ್ರೂಣವನ್ನು ಸ್ವೀಕರಿಸಲು ಮತ್ತು ನೆಲೆಗೊಳಿಸಿಕೊಳ್ಳಲು ಪ್ರಾಜೆಸ್ಟಿರಾನ್ ಗರ್ಭಕೋಶವನ್ನು ಸಿದ್ಧಪಡಿಸುತ್ತದೆ. ಜೊತೆಗೆ ಬಸಿರನ್ನು ಕಾಯ್ದುಕೊಳ್ಳುತ್ತದೆ. ಪ್ರಾಜೆಸ್ಟಿರಾನ್ ನಿರೋಧ ಈ ಪ್ರಕ್ರಿಯೆಗೆ ವಿರುದ್ಧವಾಗಿ ಕಾರ್ಯ ನಿರ್ವಹಿಸುತ್ತದೆ. RU-486 ಪ್ರಾಜೆಸ್ಟಿರಾನ್ ಕಾರ್ಯವನ್ನು ತಡೆಯುತ್ತದೆ. ಈ ಮೂಲಕ ರಕ್ತದಲ್ಲಿ ಪ್ರಾಜೆಸ್ಟಿರಾನ್ ಮಟ್ಟವನ್ನು ಇಳಿಸಿ ಭ್ರೂಣವು ಗರ್ಭಾಶಯದಲ್ಲಿ ನೆಲೆಸದಂತೆ ಮಾಡುತ್ತದೆ.

ವಿಶ್ವ ಆರೋಗ್ಯ ಸಂಸ್ಥೆಯ ಅಣತಿ ಮೇರೆಗೆ 'RU–486'ನ್ನು ದೇಶೀಯವಾಗಿ ತಯಾರಿಸುವ ತಂತ್ರಜ್ಞಾನ ಅಭಿವೃದ್ಧಿಪಡಿಸಲು ಹೈದರಾಬಾದ್ ಮೂಲದ ಭಾರತೀಯ ರಾಸಾಯನಿಕ ತಂತ್ರಜ್ಞಾನ ಸಂಸ್ಥೆಯು (ಐಐಸಿಟಿ) ಇತ್ತೀಚೆಗೆ ಕಾರ್ಯವನ್ನು ಆರಂಭಿಸಿದೆ.

ವಿಶ್ವ ಆರೋಗ್ಯ ಸಂಸ್ಥೆ ಸರಬರಾಜು ಮಾಡಿದ ನಮೂನೆಗಳೊಂದಿಗೆ ಭಾರತದ ವೈದ್ಯಕೀಯ ಸಂಶೋಧನಾ ಮಂಡಳಿಯು ಪ್ರಯೋಗಗಳನ್ನು ಕೈಗೊಂಡಿದೆ ಎನ್ನುತ್ತಾರೆ ಐಐಸಿಟಿ ನಿರ್ದೇಶಕ ಡಾ॥ ಎ. ವಿ. ರಾಮರಾಂ.

ಆದರೆ ಭಾರತೀಯ ಮಹಿಳೆಗೆ ವಿಶೇಷವಾಗಿ ಗ್ರಾಮೀಣ ಪ್ರದೇಶದ ಮಹಿಳೆಗೆ ಈ ಕ್ರಮ ಸರಿ ಹೊಂದುವುದೇ ಎಂಬುದರ ಕುರಿತಂತೆ ಮತ್ತಷ್ಟು ಅಧ್ಯಯನಗಳು ನಡೆಯಬೇಕಿವೆ.

ಜನಸಂಖ್ಯೆ ಬೆಳವಣಿಗೆಯ ನಿಯಂತ್ರಣ ಇಂದು ಅಗತ್ಯವಾಗಿದ್ದರೂ ಫಲವತ್ತತೆ (ಬಸಿರನ್ನು) ನಿಯಂತ್ರಿಸುವ ಯಾವುದೇ ನಿಖರವಾದ ಕ್ರಮವನ್ನು ಇನ್ನೂ ಗುರುತಿಸಲಾಗಿಲ್ಲ. ಬಸಿರನ್ನು ನಿಯಂತ್ರಿಸುವ ಸುರಕ್ಷತೆಯ ಕ್ರಮಗಳು ಈಗ ಅವಶ್ಯವೆನಿಸಿವೆ.

ಈ ದಿಸೆಯಲ್ಲಿ RU–486 ಹೆಚ್ಚು ಉಪಯುಕ್ತವಾಗಿದೆ. RU-486 ಸುರಕ್ಷಿತ ಮತ್ತು ಗರ್ಭಪಾತಕ್ಕಿಂತ

(19ನೇ ಪುಟ ನೋಡಿ)

# ಸಮಾನತೆಯ ಪರಿಕಲ್ಪನೆ

-ಎಂ. ಎಸ್. ಗೋರೆ

ಮಹಿಳಾ ಸಮಾನತೆಯ ಬಗ್ಗೆ ಹೇಳುವಾಗ ನಾವು ಬಹಳಷ್ಟು ಸಲ ಮಹಿಳೆಯರಿಗೆ ದೊರೆಯಬೇಕಾದ ವಿವಿಧ ಹಕ್ಕುಗಳ ಬಗ್ಗೆ ಮಾತನಾಡುತ್ತಿರುತ್ತೇವೆ. ಮಹಿಳೆಯರಿಗೆ ದೊರಕಬೇಕಾದ ನಾಗರಿಕ ಹಕ್ಕು, ಕಾನೂನಿನ ಹಕ್ಕು, ಆರ್ಥಿಕ ಹಕ್ಕು, ಆಸ್ತಿ ಹಕ್ಕು, ಉದ್ಯೋಗ, ವೇತನಗಳ ಹಕ್ಕುಗಳ ಹಾಗೆ ಸಾಮಾಜಿಕ ಸಮಾನತೆಯ ಬಗ್ಗೆಯೂ ನಾವು ಹೇಳುತ್ತಿರುತ್ತೇವೆ. ಆದರೆ ನಾಗರಿಕ, ಕಾನೂನು ಉದ್ಯೋಗ ಮುಂತಾದ ಹಕ್ಕುಗಳ ಬೇಡಿಕೆಗಳ ಸ್ವರೂಪ ಬಹುಮಟ್ಟಿಗೆ ಖಚಿತವೂ, ನಿರ್ದಿಷ್ಟವೂ ಆದದ್ದು. ನ್ಯಾಯಾಂಗದ ಬಲದಿಂದ ಅವುಗಳನ್ನು ದೊರಕಿಸಿಕೊಡಲು ಸಾಧ್ಯ. ಉದಾಹರಣೆಗೆ ಮತಚಲಾಯಿಸುವ ಹಕ್ಕು, ನಾಗರಿಕ ಮತ್ತು ವೈಧಾನಿಕ ಘಟಕಗಳಿಗೆ ಚುನಾಯಿತರಾಗುವ ಅವಕಾಶ, ತಂದೆ, ಗಂಡ ಅಥವಾ ಮತ್ತಿತರ ಕುಟುಂಬದ ಹಿರಿಯ ಪುರುಷನ ತೀರ್ಮಾನಗಳ ಅಧೀನವಲ್ಲದೆ, ಸ್ವತಂತ್ರ ವ್ಯಕ್ತಿಯಾಗಿ ಪರಿಗಣಿಸಲ್ಪಡುವ ಮತ್ತು ಸ್ವಂತವಾಗಿ ನಿರ್ಧಾರಗಳನ್ನು ಕೈಗೊಂಡು ಕಾರ್ಯ ನಿರ್ವಹಿಸುವ ಹಕ್ಕುಗಳನ್ನು ನಾವು ಪ್ರಸ್ತಾಪಿಸುತ್ತೇವೆ. ಅದೇರೀತಿ ಲಿಂಗಾಧಾರಿತ ಕಾರಣಗಳಿಗಾಗಿ ಮಹಿಳೆಯರ ದುಡಿಯುವ ಹಕ್ಕನ್ನು ಕಸಿಯದೆ ಇರಲೆಂದು, ಸಮಾನ ದುಡಿಮೆಗೆ ಸಮಾನ ವೇತನವಿರಬೇಕೆಂದೂ, ಆಸ್ತಿಯ ಹಕ್ಕುದಾರಿಕೆ, ಉತ್ತರಾಧಿಕಾರಬೇಕೆಂದೂ, ಸಾಂಪ್ರದಾಯಿಕವಾಗಿ ಮಹಿಳೆಗೇ ಮೀಸಲೆನಿಸಿರುವ ಶಿಕ್ಷಕಿ. ನರ್ಸ್‌ಗಳಂಥ ಉದ್ಯೋಗಗಳಿಗೇ ಸೀಮಿತವಾಗಿರದೆ, ಮಹಿಳೆಯರಿಗೆ ನಿಷಿದ್ಧವೆಂದು ಪರಿಗಣಿಸಲಾಗುವ ಸಶಸ್ತ್ರ ಸೈನ್ಯ, ಪೋಲೀಸುಪಡೆ, ವೈಮಾನಿಕದಳಗಳಂಥ ಉದ್ಯೋಗ ಕ್ಷೇತ್ರಗಳಿಗೆ ಪ್ರವೇಶಾವಕಾಶಬೇಕೆಂದೂ ನಾವು ಹೇಳುತ್ತಿರುತ್ತೇವೆ.

ಇಂಥ ಕಾನೂನು, ನಾಗರಿಕ ಹಾಗೂ ಆರ್ಥಿಕ ಹಕ್ಕುಗಳು ಸಂವಿಧಾನದ ಮೂಲಕ ತಾತ್ವಿಕವಾಗಿಯಾದರೂ ನಮ್ಮ ಮಹಿಳೆಯರಿಗೆ ದೊರೆತೇ ಇವೆ. ಆದರೆ ಆಚರಣೆಯಲ್ಲಿ ಈ ಹಕ್ಕುಗಳನ್ನು ಎಷ್ಟರಮಟ್ಟಿಗೆ ಮಹಿಳೆಯರು ಚಲಾಯಿಸುತ್ತಾರೆ, ಆ ಮೂಲಕ ಸಮಾನತೆಯನ್ನು ಗಳಿಸಿಕೊಳ್ಳಬಲ್ಲರು ಎಂಬುದು ಅವರ ವೈಯಕ್ತಿಕ ಮೌಲ್ಯದ ಚೌಕಟ್ಟುಗಳ ಮೇಲೆ ಅವಲಂಬಿಸಿರುತ್ತವೆ.. ತಮಗೆ ಲಭ್ಯವಿರುವ ಹಕ್ಕುಗಳನ್ನು ಉಪಯೋಗಿಸಿಕೊಳ್ಳಲು ಅವರೆಷ್ಟು ಸಿದ್ಧರು? ತಮ್ಮ ನಿಕಟ ಕುಟುಂಬ, ಸಾಮಾಜಿಕ ಸಂದರ್ಭಗಳಲ್ಲಿ ಯಾವರೀತಿ ಅವರು ಕ್ರಿಯಾನಿರತರು ಎಂಬ ಅಂಶಗಳೂ ಇಲ್ಲಿ ಮುಖ್ಯವಾಗಿ ಕೆಲಸಮಾಡುತ್ತವೆ. ಇಂಥ ಸಂದರ್ಭದಲ್ಲಿ ನ್ಯಾಯಾಂಗವು ಅವರಿಗೆ ಈ ಅವಕಾಶಗಳನ್ನು ಸೃಷ್ಟಿಸಿ, ಒದಗಿಸಿ ಕೊಡುವಲ್ಲಿ ಮುಖ್ಯಪಾತ್ರ ವಹಿಸುತ್ತದೆ.

ಆದರೆ ಸಾಮಾಜಿಕ ಸಮಾನತೆಯ ಬೇಡಿಕೆ ಹೀಗೆ ನಿರ್ದಿಷ್ಟವಲ್ಲ. ನ್ಯಾಯಾಂಗವೊಂದೇ ಅದನ್ನು ನಿರ್ಧರಿಸಬಲ್ಲ ಘಟಕವೂ ಅಲ್ಲ. ಶಿಕ್ಷಣ ಕೂಡಾ ಏಕಾಕಿಯಾಗಿ ಮಹಿಳಾ ಸಮಾನತೆಯನ್ನು ಸಾಧಿಸಿಕೊಡಲಾರದು.

ಮಹಿಳೆಯರು ತಮ್ಮ ಅತ್ಯುತ್ತಮ ಸಾಮರ್ಥ್ಯಗಳಿಸಿ ಬೆಳೆಯುವ ಕಡೆಗೆಸರ್ಕಾರ, ಸಮಾಜಗಳು ಏನು ಮಾಡಬೇಕಾಗಿದೆ ಎಂಬುದನ್ನು ಒತ್ತಿಹೇಳುವ ಮೂಲಕ ಮಹಿಳಾ ಚಳವಳಿ ಇತರ ಎಲ್ಲ ಚಳವಳಿಗಳಂತೆಯೇ ಆರಂಭವಾಯಿತು. ತಾವು ಬದುಕುತ್ತಿರುವ ಸಂಕೀರ್ಣ ಸಮಾಜದ ಒಳಗೆ, ಅದರೊಳಗಿಂದಲೇ ಹುಟ್ಟಿದ ಬೇಡಿಕೆಗಳನ್ನು ಸರ್ಕಾರದ ಮುಂದಿಡುವುದು ಸುಲಭವಿದೆ, ಆದರೆ ಸಾಮಾಜಿಕ ಸಮಾನತೆ ಎಂಬುದು ಅಸ್ಪಷ್ಟ ಹಾಗೂ ಸಂದಿಗ್ಧತೆಗಳುಳ್ಳ ಪರಿಕಲ್ಪನೆಯಾಗಿದ್ದು ಪರಂಪರಾಗತ ಮೌಲ್ಯ ಚೌಕಟ್ಟುಗಳಡಿಯಲ್ಲಿ ಬದುಕುತ್ತಿರುವ ಸ್ತ್ರೀಯರು ಮತ್ತು ಪುರುಷರಿಬ್ಬರಿಂದಲೂ ನ್ಯಾಯ ಬೇಡಬೇಕಾದ ವಿಚಿತ್ರ ಸಂದರ್ಭ ಇಲ್ಲಿದೆ. ಎದುರಾಳಿ ಯಾರೋ ಗೊತ್ತಾದ ಶತ್ರುವಲ್ಲ. ತಾವು ಬದುಕುತ್ತಿರುವ ಕುಟುಂಬ, ಸಮುದಾಯಗಳೊಳಗಡೆ, ತಾವು ಪಡೆದಿರುವ ಮಾನವೀಯ ಸಂಬಂಧಗಳ ಬಗ್ಗೆಯೇ ಇಲ್ಲಿ ಹೋರಾಟ ನಡೆದಿದೆ/ನಡೆಯುತ್ತಿದೆ/ನಡೆಯಬೇಕಾಗಿದೆ.

---

(7ನೇ ಪುಟದಿಂದ)

ಅಂಥ ಸಂದರ್ಭಗಳಲ್ಲಿ ಅನಾಥಯುವತಿಯರೆಂದು ಅತಿರೇಕದ ಸ್ವಾತಂತ್ರ್ಯ ವಹಿಸುವವರು, ದುರ್ಭಾವನೆಯಿಂದ ಹಣ ಕೊಡುವವರನ್ನು ಎದುರಿಸಬೇಕಾಗುತ್ತಿತ್ತು. ಅಂಥ ಹಲವು ಸಂದರ್ಭಗಳಲ್ಲಿ ಅಂಥವರ ಮುಖಕ್ಕೆ ಹಣ ಎಸೆದು ಬಂದದ್ದೂ ಉಂಟು. ಇನ್ನು ಹೊರ ಸಮಾಜದ ಹೆಂಗಸರೂ ಗಂಡಸರೂ ತೋರುತ್ತಿದ್ದ ಸಂಶಯ ಬುದ್ಧಿಗೂ ಕೊರತೆಯಿರಲಿಲ್ಲ. ಒಂದು ಪ್ರಕರಣ 1959ರಲ್ಲಿ 'ವೀರಮಾತೆ'ಯಲ್ಲೂ ವರದಿಯಾಗಿ ಅದಕ್ಕೆ ಜನರು ಬಲವಾಗಿ ಪ್ರತಿಕ್ರಿಯಿಸಿದ್ದುದನ್ನು ವೆಂಕಮ್ಮ ನೆನೆಯುತ್ತಾರೆ.

* ಸಹ ಸಂಪಾದಕಿಯಾಗಿ, ಹಲವಾರು ವೈಚಾರಿಕ ಪ್ರಬಂಧಗಳನ್ನು ವೀರಮಾತೆಯಲ್ಲಿ ಬರೆದಿರುವ ವೆಂಕಮ್ಮ ತಮ್ಮ ಬರಹಕ್ಕೆ ಪ್ರಭಾವ ಯಾರಿಂದ ಎಂದಾಗ ಸ್ವಾತಂತ್ರ್ಯ ಹೋರಾಟಗಾರ ಗೋವಿಂದ–ರಾವ್ ಮಳಿಯೆ ಅವರ ತಮ್ಮ ಗೋಪಾಲಕೃಷ್ಣ–ರಾವ್ ಮಳಿಯೆ ಅವರನ್ನು ಸ್ಮರಿಸುತ್ತಾರೆ. ಗೋಪಾಲಕೃಷ್ಣರಾಯರು 'ಕಲಿಯುಗ' ಎಂಬ ಪತ್ರಿಕೆಯನ್ನು ನಡೆಸುತ್ತಿದ್ದರು.

ವನಿತಾ ಸೇವಾ ಸಮಾಜದಿಂದ ಮೊದಲು ಹೊರಡಿಸುತ್ತಿದ್ದ "ಪ್ರಗತಿ" ಎಂಬ ಕೈ ಬರಹದ ಪತ್ರಿಕೆಗೂ ಅವರು ಬರೆಯುತ್ತಿದ್ದರು. ಅವರ ಲೇಖನಗಳು, ಉಪನ್ಯಾಸಗಳು, ಅವರ ಭಾವಪೂರ್ಣ ವಾಗ್ಝರಿಗಳು ವೆಂಕಮ್ಮನವರನ್ನು ಪ್ರಭಾವಿಸಿ ಬರೆಯಲು ಪ್ರೇರಿಸಿದ್ದವು. ●

---

(17ನೇ ಪುಟದಿಂದ)

ಸುಲಭದ್ದು, ಜೊತೆಗೆ ಯಾವುದೇ ವ್ಯತಿರಿಕ್ತ ಪರಿಣಾಮ ಬೀರುವುದಿಲ್ಲ.

'RU–486'ನ್ನು ಸ್ತನ ಕ್ಯಾನ್ಸರ್ ಚಿಕಿತ್ಸೆಗಾಗಿಯೂ ಬಳಸಬಹುದಾಗಿದೆ. ಅಲ್ಲದೆ ಇತರ ಕೆಲವು ಸಂದರ್ಭಗಳಲ್ಲಿಯೂ ಇದರ ಪ್ರಯೋಜನ ಪಡೆಯಬಹುದಾಗಿದೆ.

ಮೈಫೆಪ್ರಿಸ್ಟೋನ್‌ನನ್ನು ಫ್ರಾನ್ಸ್‌ನಲ್ಲಿ 1980ರಲ್ಲಿ ತಯಾರಿಸಲಾಯಿತು. 1990ರಲ್ಲಿ ವಾಣಿಜ್ಯ ಉದ್ದೇಶಗಳಿಗಾಗಿ ಇವನ್ನು ಮೈಫೆಜಿನ್ ಎಂಬ ಹೆಸರಿನಿಂದ ಬಿಡುಗಡೆ ಮಾಡಲಾಯಿತು. ಬ್ರಿಟನ್‌ನಲ್ಲಿ 2 ಸಾವಿರಕ್ಕೂ ಹೆಚ್ಚು ಮಹಿಳೆಯರ ಮೇಲೆ ವೈದ್ಯಕೀಯ ಪ್ರಯೋಗಗಳನ್ನು ನಡೆಸಿದ ತರುವಾಯ ಈ ಔಷಧವನ್ನು ವಾಣಿಜ್ಯ ಉದ್ದೇಶಕ್ಕಾಗಿ ತಯಾರಿಸಲು ಅನುಮತಿ ನೀಡಲಾಯಿತು. ●

## ಕಂಬನಿ

ಕರ್ನಾಟಕದ ಕಾರ್ಮಿಕ ಚಳುವಳಿಯಲ್ಲಿ ಮಹತ್ವದ ಸ್ಥಾನ ಪಡೆದ ಕಾರ್ಮಿಕ ನಾಯಕಿ ಮೇರಿ ದೇವಾಸಿಯಾ ಇನ್ನಿಲ್ಲ. ಸೆಪ್ಟೆಂಬರ್ 13ರಂದು ಬೆಂಗಳೂರಿನಲ್ಲಿ ನಿಧನ ಹೊಂದಿದ 67 ವರ್ಷ ವಯಸ್ಸಿನ ಮೇರಿದೇವಾಸಿಯಾ ಆದರ್ಶ ಕಾರ್ಮಿಕ ನಾಯಕಿಯಾಗಿದ್ದರು.

1950ರಲ್ಲಿ ಸೆಕ್ರೆಟೇರಿಯಟ್‌ನಲ್ಲಿ ಕೆಲಸಕ್ಕೆ ಸೇರಿದ ದೇವಾಸಿಯಾ, ರಾಜ್ಯ ಸರ್ಕಾರಿ ನೌಕರರ ಹಿತಕ್ಕಾಗಿ ಬಹುವಾಗಿ ದುಡಿದರು. ಅವರ ಕಾರ್ಮಿಕ ಸಂಘಟನೆಯ ಚಟುವಟಿಕೆಗಳಿಗಾಗಿ ಮೇ 1965ರಲ್ಲಿ ಕೆಲಸದಿಂದ ವಜಾ ಆದರು. ಆದರೆ ಸುಪ್ರೀಂಕೋರ್ಟಿನ ತೀರ್ಪು ಮೇರಿಯವರ ಪರವಾಗಿಯೇ ಬಂದಿತು. ಕರ್ನಾಟಕ ಸರ್ಕಾರಿ ನೌಕರರ ಸಂಘದ ಸ್ಥಾಪಕಾಧ್ಯಕ್ಷೆಯಾದ ಮೇರಿ ದೇವಾಸಿಯಾ 1960ರಲ್ಲಿ ಅಖಿಲ ಭಾರತ ಮಟ್ಟದಲ್ಲಿ ರೂಪುಗೊಂಡ ಸರ್ಕಾರಿ ನೌಕರರ ಫೆಡರೇಷನ್‌ನ ಸ್ಥಾಪಕ ಸದಸ್ಯೆ, ಉಪಾಧ್ಯಕ್ಷೆಯೂ ಆಗಿದ್ದರು.

ಅಗಲಿದ ಕಾರ್ಮಿಕ ನಾಯಕಿ ಮೇರಿ ದೇವಾಸಿಯಳಿಗೆ ಅಚಲ ತನ್ನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

*Reg No MAG (5) PRC,DEGL 036/89/87*
BOOK-POST/Periodicals

To,

*If undelivered please return to :*
**Jagruthi Mahila Adhyayana Kendra**
**401, Vijay Tower, 2nd Main, RPC Layout**
**Vijayanagar, II Stage, Bangalore-40**
**Pin-560 040**